# ಅಪೂರ್ವ ಕ್ಷಣಗಳು

✍ ಎನ್.ಪಿ.ಹಫೀಜ್ ಮುಹಮ್ಮದ್

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಮಕ್ಕಳ ಮನಸ್ಸು- ಅವರಿಗೆ ಆಟೋಟ ಮತ್ತು ಮನೋರಂಜನೆಗಳಲ್ಲಿಯೇ ಆಸಕ್ತಿ. ಅದೇ ರೀತಿ ಮಕ್ಕಳಿಗೆ ಕತೆಗಳೆಂದರೆ ಅಚ್ಚುಮೆಚ್ಚು, ತಮ್ಮ ತಾಯಿ, ಅಜ್ಜಿ-ಅಜ್ಜಂದಿರನ್ನು ಅದಕ್ಕಾಗಿ ಅವರು ಪೀಡಿಸುತ್ತಿರುತ್ತಾರೆ. ಅದೇ ರೀತಿ ಮಕ್ಕಳನ್ನು ಲಾಲಿಸಿ ಮಲಗಿಸಲು ಹೆಚ್ಚಾಗಿ ಜೋಗುಳ ಹಾಡುಗಳನ್ನು ಹಾಡುವುದು, ಕತೆಗಳನ್ನು ಹೇಳುವುದು ಹಿರಿಯರ ರೂಢಿ, ಚಿಕ್ಕಂದಿನಲ್ಲಿ ಹೇಳಿದ ಕತೆಗಳನ್ನು ಮಕ್ಕಳು ಸದಾ ನೆನಪಿನಲ್ಲಿಡುತ್ತಾರೆ. ಅದರಲ್ಲೂ ಉತ್ತಮ ನೀತಿಕತೆಗಳಿಂದ ಸಿಗುವ ಪಾಠಗಳನ್ನು ಅವರು ಜೀವನದಲ್ಲಿ ಪಾಲಿಸಲು ಪ್ರಯತ್ನಿಸುತ್ತಾರೆ. ಏಕೆಂದರೆ ಮಕ್ಕಳು ಹಸಿಮಣ್ಣಿನಂತೆ, ಅದಕ್ಕೆ ಕಲ್ಲು ಹೊಡೆದಾಗ ಅದು ನಾಟುವಂತೆ ಪುಟ್ಟ ಮನಸ್ಸುಗಳಲ್ಲಿ ಉತ್ತಮ ಕತೆಗಳು ಹೆಚ್ಚು ಪ್ರಭಾವ ಬೀರುತ್ತದೆ.

ಮಕ್ಕಳ ಈ ಮನೋವೃತ್ತಿಯನ್ನು ಮುಂದಿಟ್ಟುಕೊಂಡೇ 'ಅಪೂರ್ವ ಕ್ಷಣಗಳು' ಎಂಬ ಈ ಕೃತಿಯನ್ನು ಶಾಂತಿ ಪ್ರಕಾಶನ ಹೊರತಂದಿದೆ. ಇಸ್ಲಾಮೀ ಇತಿಹಾಸದ ಕೆಲವು ಘಟನೆಗಳನ್ನು ಆಧರಿಸಿ ಕೇರಳದ ಎನ್.ಪಿ.ಹಫೀಝ್ ಮುಹಮ್ಮದ್ ಎಂಬವರು ಈ ಮಲಯಾಳಮ್ ಕೃತಿಯನ್ನು ರಚಿಸಿದ್ದಾರೆ. ಇದನ್ನು ಮರ್ಯಮ್ ಶಹೀರ (ಉಪನ್ಯಾಸಕಿ, ಹಿರಾವಿಮೆನ್ಸ್ ಕಾಲೇಜು) ಅವರು ಕನ್ನಡಕ್ಕೆ ಸುಂದರವಾಗಿ ಅನುವಾದಿಸಿದ್ದಾರೆ. ಮಕ್ಕಳನ್ನು ಚಿಕ್ಕಂದಿನಿಂದಲೇ ಚಾರಿತ್ರ್ಯವಂತರನ್ನಾಗಿ ಬೆಳೆಯಲು ಇಂತಹ ಕತೆಗಳು ಸಹಕಾರಿಯಾಗಬಲ್ಲವು. ಈ ನಿಟ್ಟಿನಲ್ಲಿ ಶಾಂತಿ ಪ್ರಕಾಶನ ಹೊರತಂದಿರುವ ಈ ಕೃತಿಯು ಎಳೆ ಮಕ್ಕಳಿಗೆ ಪ್ರಯೋಜನಕಾರಿಯಾಗಲು ಪ್ರತಿಯೊಂದು ಮನೆಯಲ್ಲೂ ಇರಬೇಕಾದುದು ಅಗತ್ಯವೆಂದು ಭಾವಿಸುತ್ತೇವೆ. ಕನ್ನಡ ಬಾಲ ಸಾಹಿತ್ಯಕ್ಕೆ ಹಾಗೂ ಮಕ್ಕಳ ಕಥಾ ಲೋಕಕ್ಕೆ ಇದೊಂದು ಹೊಸ ಸೇರ್ಪಡೆಯಾಗಲೆಂದು ಹಾರೈಸುತ್ತೇವೆ. ಸರ್ವಶಕ್ತನಾದ ಜಗದೊಡೆಯನು ನೆರವಾಗಲಿ.

-ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# 1. ಉಚಿತವಾದ ನಷ್ಟಪರಿಹಾರ

ಖಲೀಫ ಉಮರ್‌ರ(ರ) ಕಾಲದಲ್ಲಿ ಅಮ್ರ್ ಬಿನ್ ಆಸ್ ಈಜಿಪ್ಟ್ ಮತ್ತು ಸಿರಿಯಾವನ್ನು ವಶಪಡಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಅವರು ವಶಪಡಿಸಿಕೊಂಡಿದ್ದ ದೇಶದಲ್ಲಿ ವಾಸಿಸುವವರಿಗೆ ಅವರ ಧಾರ್ಮಿಕ ವಿಶ್ವಾಸ ಮತ್ತು ಆಚಾರಗಳಿಗೆ ಸ್ವಾತಂತ್ರ್ಯ ನೀಡಿದ್ದರು.

ಒಂದು ದಿನ ಜನರ ಒಂದು ಗುಂಪು ಅಮ್ರ್ ಬಿನ್ ಆಸ್‌ರ ಭೇಟಿಗೆ ಬಂದರು. ಆವೇಶಭರಿತರಾದ ಅವರು ಖಡ್ಗ ಹಿಡಿದಿದ್ದರು. ಅಮ್ರ್‌ರವರು ಅವರ ನಾಯಕನೊಂದಿಗೆ ಪ್ರಶ್ನಿಸಿದರು. ''ನನ್ನಿಂದ ನೀವು ಯಾವ ಸಹಾಯವನ್ನು ಬಯಸುತ್ತೀರಿ?''

ನಾಯಕ ಕೇಳಿದರು: ''ನೀವು ನ್ಯಾಯಯುತವಾಗಿ ಆಡಳಿತ ನಡೆಸುತ್ತಿರುವವರು ಎಂಬ ಆತ್ಮಾಭಿಮಾನ ಇರುವ ಆಡಳಿತಗಾರನಲ್ಲವೇ?

''ಹೌದು, ಹಾಗಾಗಬೇಕೆಂದು ಬಯಸುತ್ತೇನೆ.''

''ಹಾಗಾದರೆ ಕೇಳಿ, ನಿಮ್ಮ ಜನರು ನಮ್ಮ ಪವಿತ್ರವಾದ ವಿಗ್ರಹವನ್ನು ಕೆಡವಿದ್ದಾರೆ.''

''ನಿಮ್ಮ ಈ ಆರೋಪವನ್ನು ಸತ್ಯವೆಂದು ನಂಬುತ್ತೇನೆ.''

''ನಮ್ಮ ಜೊತೆಯಲ್ಲಿ ಬಂದವರ ಕಣ್ಣುಗಳನ್ನೊಮ್ಮೆ ನೋಡಿದರೆ, ಸತ್ಯವೆಂದು ತಿಳಿಯಲು ಅದು ಸಾಕಾಗುವುದು.''

''ನನ್ನ ವಿಶ್ವಾಸವು ವಿಗ್ರಹಾರಾಧನೆಯನ್ನು ಅಂಗೀಕರಿಸುವುದಿಲ್ಲವೆಂಬುದು ನಿಜ. ಆದರೆ ವಿಗ್ರಹಾರಾಧನೆ ಮಾಡುವವರನ್ನು ನಾನು ಎಂದೂ ತಡೆಯಲಿಲ್ಲ, ವಿಗ್ರಹಗಳನ್ನು ನಾಶಪಡಿಸಲು ಯಾರನ್ನು ನೇಮಿಸಲೂ ಇಲ್ಲ.''

''ಆದರೂ ಹಾಗೆ ಆಗಿಬಿಟ್ಟಿದೆ.''

''ಒಂದು ವೇಳೆ ಹಾಗೆಯೇ ಆಗಿದ್ದರೆ ಅದರಿಂದ ನನಗೆ ತುಂಬಾ ವಿಷಾದವಾಗಿದೆ.''

''ಅದು ನಮ್ಮ ನಷ್ಟಕ್ಕಿರುವ ಪರಿಹಾರವಲ್ಲ.''

''ಅದಿರಲಿ, ಆಡಳಿತಾಧಿಕಾರಿ ಖೇದ ವ್ಯಕ್ತಪಡಿಸಿ ಕ್ಷಮೆ ಕೇಳಿದ ಮಾತ್ರಕ್ಕೆ,ಅದು ಸೂಕ್ತವಾದ ಪರಿಹಾರವಾದೀತೆಂದು ಭಾವಿಸುವಂತಿಲ್ಲ. ಕೂಡಲೇ ನಿಮ್ಮ ವಿಗ್ರಹವನ್ನು ಹಳೆಯ ರೂಪಕ್ಕೆ ಬದಲಿಸಿ ಕೊಡಬೇಕೆಂದು ನಾನು ಉಪದೇಶಿಸುತ್ತೇನೆ.''

ಅಮ್ರ್‌ರ ಮಾತುಗಳು ಕೋಪೋದ್ರಿಕ್ತರಾಗಿ ಬಂದವರನ್ನು ಸಮಾಧಾನ ಪಡಿಸಲಿಲ್ಲ. ಅವರು ತಿಳಿಸಿದರು. ''ಆ ವಿಗ್ರಹವನ್ನು ಯಾವ ರೀತಿಯಲ್ಲೂ ಸರಿಪಡಿಸಲು ಸಾಧ್ಯವಿಲ್ಲ. ಅದರ ಮೂಗು ತುಂಡಾಗಿದೆ. ಅದನ್ನು ಅದಕ್ಕೆ ಪುನಃ ಜೋಡಿಸಲು ಸಾಧ್ಯವಿಲ್ಲ.''

''ಹಾಗಾದರೆ....ಅಂತಹದ್ದೇ ಒಂದು ವಿಗ್ರಹವನ್ನು ಆದಷ್ಟು ಬೇಗ ನಿರ್ಮಿಸಿ ಕೊಡಲು ನಾವು ಆಜ್ಞಾಪಿಸುತ್ತೇವೆ'' ಅಮ್ರ್ ಹೇಳಿದರು.

''ಅದರಿಂದೇನು ಪ್ರಯೋಜನ! ನಮಗೆ ಈ ವಿಗ್ರಹದೊಂದಿಗಿರುವ ಭಾವನಾತ್ಮಕ ಸಂಬಂಧವು ಇನ್ನೊಂದು ವಿಗ್ರಹದಲ್ಲಿರಲು ಸಾಧ್ಯವೇ? ಹಲವಾರು ವರ್ಷಗಳಿಂದಲೂ ನಾವು ಆರಾಧಿಸುತ್ತಾ ಬಂದ ವಿಗ್ರಹದ ಬದಲಿಗೆ ಒಂದು ಹೊಸ ವಿಗ್ರಹವನ್ನು ಕೊಟ್ಟರೆ ನಮಗೆ ಸಮಾಧಾನವಾದೀತೆಂದು ಭಾವಿಸುತ್ತೀರಾ?''

ಅಮ್ರ್ ಬೇರೆ ದಾರಿಗಾಣದೆ ಸಂಕಟಪಟ್ಟರು. ಅವರು ಹೇಳಿದರು, ''ಹಾಗಾದರೆ ನೀವೇ ಒಂದು ಪರಿಹಾರ ಸೂಚಿಸಿ.''

''ಅದಕ್ಕೆ ನಮ್ಮ ಬಳಿ ಒಂದೇ ಒಂದು ಪರಿಹಾರವಿದೆ. ನಿಮ್ಮ ಪ್ರವಾದಿಯ ವಿಗ್ರಹವನ್ನು ನಿರ್ಮಿಸಿ ಮತ್ತು ಅದರ ಮೂಗು ತುಂಡರಿಸಲು ನಮಗೆ ಅನುಮತಿ ನೀಡಬೇಕು.''

ಅವರನಾಯಕನಮಾತುಗಳನ್ನಾಲಿಸಿದಅಮ್ರ್‌ರಮುಖಭಾವಬದಲಾಯಿತು. ಅವರು ತನ್ನ ಒರೆಯಿಂದ ಖಡ್ಗವನ್ನು ಹೊರ ತೆಗೆದರು. ಆತ್ಮ ನಿಯಂತ್ರಣಕ್ಕಾಗಿ ಬಹಳ ಕಷ್ಟಪಟ್ಟರು. ಸ್ವಲ್ಪ ಸಮಯದ ನಂತರ ''ವಿಗ್ರಹಾರಾಧನೆಯನ್ನು ವಿರೋಧಿಸಿದ ನಮ್ಮ ಪ್ರವಾದಿಯ ವಿಗ್ರಹವನ್ನು ನಿರ್ಮಿಸಲು ನೀವು ಆದೇಶಿಸುವುದೇ? ಅದಕ್ಕಿಂತಲೂ ನಾವು ಸಾಯುವುದು ಒಳಿತು. ಸ್ವಲ್ಪ ಹೊತ್ತು ಸುಮ್ಮನಾದ ಅಮ್ರ್ ನಾಯಕನೊಂದಿಗೆ ಪುನಃ ಕೇಳಿದರು. ''ಸಹೋದರಾ, ಹೇಳಿರಿ, ಆ ವಿಗ್ರಹದ ಮೂಗಿನ ಬದಲಿಗೆ ನಮ್ಮ ಪೈಕಿ ಯಾರದಾದರೂ ಮೂಗು ಕೊಟ್ಟರೆ ಅದಕ್ಕೆ ಪರಿಹಾರವಾಗಬಹುದೇ? ಹೇಳಿರಿ, ನಮ್ಮ ಪೈಕಿ ಯಾರ ಮೂಗು ಬೇಕು?

ನಾಯಕ ಅದನ್ನು ನಿರೀಕ್ಷಿಸಿರಲಿಲ್ಲ. ಅವರಿಗೆ ಏನು ಉತ್ತರ ಕೊಡಬೇಕೆಂದು ತೋಚಲಿಲ್ಲ. ಜೊತೆಯಲ್ಲಿ ಬಂದವರನ್ನು ನೋಡಿ ಹೇಳಿದರು. ''ಅದು ನ್ಯಾಯಯುತ ಪರಿಹಾರವಾಗಿದೆ. ಆದರೆ.....ನಮಗೆ ಯಾರ ಮೂಗು ಬೇಕೆಂದು ಇವರೊಂದಿಗೆ ಸಮಾಲೋಚಿಸದೆ ಹೇಳಲು ಸಾಧ್ಯವಿಲ್ಲ. ಅದಕ್ಕೆ ಸ್ವಲ್ಪ ಸಮಯ ಕೊಡಿರಿ!''

"ಸರಿ.... ಹಾಗಾದರೆ ನಾಳೆ ಬೆಳಿಗ್ಗೆ ನಿಮಗೆ ಯಾರ ಮೂಗು ಬೇಕೆಂದು ತಿಳಿಸಿ."

"ನ್ಯಾಯ ಪಾಲಕನಾದ ತಾವು ಹೇಳಿದ ಮಾತನ್ನು ನಂಬಬಹುದಲ್ಲವೇ?"

"ಹೌದು, ಖಂಡಿತವಾಗಿಯೂ." ಅಮ್ರ್ ಹೇಳಿದರು.

ಮರುದಿನ, ದರ್ಬಾರಿಗೆ ಅವರ ಧಾರ್ಮಿಕ ನಾಯಕ ಮತ್ತು ಅನುಯಾಯಿಗಳು ಬಂದರು. ನಾಯಕ ಅಮ್ರ್‌ರ ಬಳಿಗೆ ಬಂದಾಗ ಅಮ್ರ್ ಹೇಳಿದರು. "ನಿಮ್ಮ ಮತ್ತು ಅನುಯಾಯಿಗಳ ನೋವೇನೆಂಬುದನ್ನು ನಾನು ಚೆನ್ನಾಗಿ ಬಲ್ಲೆನು. ಈ ದೊಡ್ಡ ಅಪರಾಧವೆಸಗಿರುವುದು ನನ್ನ ಅನುಯಾಯಿಗಳ ಪೈಕಿ ಯಾರಾದರೊಬ್ಬರು ಆಗಿರಬಹುದು ತಾನೆ? ನಾನು ಅವರ ನಾಯಕ. ಇದೋ, ನನ್ನ ಮೂಗು ಕತ್ತರಿಸಿ ತೆಗೆಯಿರಿ."

ಅಮ್ರ್ ಬಿನ್ ಆಸ್ ಒರೆಯಲ್ಲಿದ್ದ ಖಡ್ಗವನ್ನು ಹೊರಗೆಳೆದು ಆ ನಾಯಕನಿಗೆ ನೀಡಿದರು. ಅದನ್ನು ಕಂಡು ಅಲ್ಲಿ ನೆರೆದಿದ್ದವರೆಲ್ಲರೂ ನಿಬ್ಬೆರಗಾದರು. ಇನ್ನೇನು ಸಂಭವಿಸಲು ಹೋಗುತ್ತಿದೆಯೆಂದು ತಿಳಿಯದೆ ಕಂಗಾಲಾಗಿ ಬಿಟ್ಟಿದ್ದರು. ಅವರ ನಾಯಕ ಖಡ್ಗವು ಹರಿತವಾಗಿದೆಯೇ ಎಂದು ಪರಿಶೋಧಿಸುವುದನ್ನು ಕಂಡು ಅವರೆಲ್ಲರ ಹೃದಯ ಬೇಗುದಿ ಹೆಚ್ಚಾಗ ತೊಡಗಿತು. ಅಷ್ಟು ಹೊತ್ತಿಗೆ ಅಲ್ಲಿ ನೆರೆದಿದ್ದವರ ಪೈಕಿ ಒಬ್ಬನು, ಎಲ್ಲರನ್ನು ದೂಡಿ ಬಂದು ಅಮ್ರ್‌ರ ಮುಂದೆ ಮಂಡಿಯೂರಿ ನಿಂತು ಕಾಲಿಗೆ ಬೀಳುತ್ತಾ "ಪ್ರಭು, ನನ್ನ ಮೂಗು ಕತ್ತರಿಸಲು ಆಜ್ಞಾಪಿಸಿರಿ. ಏಕೆಂದರೆ, ಆ ವಿಗ್ರಹದ ಮೂಗು ಕತ್ತರಿಸಿದ ಪಾಪಿ ನಾನೇ." ಎಲ್ಲರೂ ನಿಬ್ಬೆರಗಾದರು. ಆ ದೃಶ್ಯವನ್ನು ಕಂಡು ನಾಯಕನ ಮನಸ್ಸು ಕರಗಿತು. ತನ್ನ ಕೈಯಲ್ಲಿದ್ದ ಖಡ್ಗವನ್ನು ನೀಡುತ್ತಾ" ಪ್ರಭೂ, ಈ ತಪ್ಪನ್ನು ಸ್ವತಃ ಒಪ್ಪಿಕೊಂಡವನೂ, ಆಡಳಿತಾಧಿಕಾರಿಯಾದ ತಾವೂ ಅನುಗ್ರಹೀತರು(ಕೃತಾರ್ಥರು). ಇವನ ಮತ್ತು ನಿಮ್ಮ ಮೂಗನ್ನು ತುಂಡರಿಸುವುದಕ್ಕಿಂತ ದೊಡ್ಡ ಅಪರಾಧ ಬೇರೊಂದಿರಲಾರದು. ರಾಜ ಮತ್ತು ಒಬ್ಬ ಸಾಮಾನ್ಯ ಪ್ರಜೆ ಇಷ್ಟೊಂದು ಸತ್ಯಸಂಧರೂ ನ್ಯಾಯ ಪ್ರಜ್ಞೆಯುಳ್ಳವರೂ ಆಗಿರುವುದನ್ನು ಕಂಡು ಆಶ್ಚರ್ಯವಾಗುತ್ತಿದೆ. ಪ್ರಭೂ, ಈ ನಿಮ್ಮ ನ್ಯಾಯ ಪ್ರಜ್ಞೆಯು ನಮ್ಮ ಪಾಲಿಗೆ ಉಚಿತವಾದ ನಷ್ಟಪರಿಹಾರವಾಗಿದೆ. ಇನ್ನು ನಾವು ಸಂತೃಪ್ತರಾಗಿದ್ದೇವೆ. ಹೃದಯಾಂತರಾಳದಿಂದ ನಾಯಕ ಮತ್ತು ಅನುಯಾಯಿಗಳು ಅವರನ್ನು ಅಭಿನಂದಿಸುತ್ತಾ ಸಂತೋಷದಿಂದ ಮರಳಿ ಹೋದರು.

---

• ಪ್ರವಾದಿ ಮುಹಮ್ಮದ್‌ರ(ಸ) ಕಾಲದಲ್ಲಿ ಹುದೈಬಿಯಾ ಒಪ್ಪಂದದ ಸಂದರ್ಭದಲ್ಲಿ ಇಸ್ಲಾಮ್ ಸ್ವೀಕರಿಸಿದ್ದ ಅಮ್ರ್ ಬಿನ್ ಆಸ್ ಪರಾಕ್ರಮಿಯಾದ ದಂಡನಾಯಕರಾಗಿದ್ದರು.

## 2. ತೋಳ ಮತ್ತು ಸಿಂಹ

ಖಲೀಫ ಅಸ್ಸಫಾಹಿಯವರ ಗುಪ್ತಚರರು ಗ್ರಾಮಕ್ಕೆ ತಲುಪಿದರು. ಇಬ್ರಾಹೀಮ್ ಅಲ್ಲಿಂದ ಓಡಿ ಹೋದ; ಗುಪ್ತಚರರು ಗ್ರಾಮೀಣರನ್ನು ತಪಾಸಣೆ ನಡೆಸುತ್ತಿರುವುದನ್ನು ಕಂಡು ಇಬ್ರಾಹೀಮನಿಗೆ ಅಲ್ಲಿಂದ ಓಡಿ ಹೋಗಬೇಕಾದುದು ಅನಿವಾರ್ಯವಾಗಿತ್ತು.

ನಗರಕ್ಕೆ ಹೊರಟ ಒಂದು ವರ್ತಕ ತಂಡದೊಂದಿಗೆ ರಹಸ್ಯವಾಗಿ ಸೇರಿಕೊಂಡ ಇಬ್ರಾಹೀಮ್, ಕೂಫಾ ನಗರಕ್ಕೆ ಬಂದು ತಲುಪಿದನು. ಇಬ್ರಾಹೀಂ ಒಬ್ಬ ಭಿಕ್ಷುಕನ ವೇಷ ಧರಿಸಿ ಬೀದಿಬದಿಗಳಲ್ಲೇ ಕಾಲ ಕಳೆಯಬೇಕಾಗಿ ಬಂತು. ಇಬ್ರಾಹೀಮ್ ನಗರದಲ್ಲಿದ್ದಾನೆಂಬ ಸುದ್ದಿ ಗುಪ್ತಚರರಿಗೆ ಹೇಗೋ ತಿಳಿಯಿತು. ಅವರು ಕೂಡಾ ವೇಷ ಬದಲಿಸಿ ನಗರದೊಳಗೆ ಹುಡುಕಲಾರಂಭಿಸಿದರು.

ಇಬ್ರಾಹೀಮ್ ಒಂದು ಅಂಗಡಿಯ ಜಗಲಿಯಲ್ಲಿ ನಿದ್ರಿಸುತ್ತಿದ್ದನು. ಅಲ್ಲಿಗೆ ಒಬ್ಬ ಹಳ್ಳಿಗ ಬಂದು ತನಗೆ ಕೂಫಾ ನಗರವು ಅಪರಿಚಿತವಾಗಿದೆಯೆಂದೂ ಕೆಲಸ ಹುಡುಕಿ ಬಂದ ನನಗೆ ಸಹಾಯ ಮಾಡಬೇಕೆಂದೂ ಬೇಡಿಕೊಂಡನು. ಆದರೆ ಇಬ್ರಾಹೀಮನಿಗೆ ಹಳ್ಳಿಗ ಗುಪ್ತಚರನಾಗಿದ್ದಾನೆಂದೂ ತನ್ನನ್ನು ಬಲೆಯಲ್ಲಿ ಸಿಲುಕಿಸಲು ಬಂದಿರುವನೆಂದೂ ತಿಳಿಯಿತು. ಅವನು ಅರ್ಧರಾತ್ರಿಯಲ್ಲಿಯೇ ಅಲ್ಲಿಂದ ಪರಾರಿಯಾದನು. ನಗರದಲ್ಲಿರುವ ನಿರಾಶ್ರಿತ ಶಿಬಿರಗಳಲ್ಲಿ ಭಯಭೀತನಾಗಿ ಅಲೆಯ ತೊಡಗಿದನು.

ಇಬ್ರಾಹೀಮ್ ತುಂಬಾ ಬಳಲಿದ್ದಾನೆ. ಒಂದು ಗುಟುಕು ನೀರು ಸಿಕ್ಕಿದರಾದೀತೆಂದು ಬಯಕೆಯಾಗುತ್ತಿದೆ. ಮನೆಬಾಗಿಲುಗಳೆಲ್ಲವೂ ಮುಚ್ಚಿಕೊಂಡಿವೆ. ಒಂದು ಹೆಜ್ಜೆ ಮುಂದಡಿಯಿಡಲು ಸಾಧ್ಯವಾಗುತ್ತಿಲ್ಲ, ತಲೆ ತಿರುಗುತ್ತದೆ. ಕಣ್ಣು ಮಂಜಾಯಿತು. ಕೈಕಾಲುಗಳು ನಡುಗ ತೊಡಗಿತು. ಇಬ್ರಾಹೀಮ್ ಒಂದು ಮನೆಯ ಜಗಲಿಯಲ್ಲಿ ಬಂದು ಬೀಳುತ್ತಾನೆ.

ಪ್ರಭಾತ ಸಮಯವಾದಾಗ ನಮಾಝಿಗೆಂದು ಮನೆಯ ಯಜಮಾನ ಹೊರ ಬಂದಾಗ ಜಗಲಿಯಲ್ಲಿ ಬಿದ್ದುಕೊಂಡಿರುವ ಯುವಕನನ್ನು ನೋಡಿದರು. ಅವರು ಕೂಡಲೇ ತನ್ನ ಕೆಲಸದವನನ್ನು ಕರೆದು, ಇಬ್ಬರೂ ಸೇರಿ ಇಬ್ರಾಹೀಮನನ್ನು ಮನೆಯೊಳಗೆ ಕರೆದುಕೊಂಡು ಹೋದರು. ಮುಖಕ್ಕೆ ಸ್ವಲ್ಪ ನೀರನ್ನು ಚಿಮುಕಿಸಿದರು.

ಇಬ್ರಾಹೀಮ್ ಕಣ್ಣು ತೆರೆದಾಗ ತಾನು ಒಂದು ಮನೆಯಲ್ಲಿರುವುದಾಗಿ ಮನಗಂಡನು. ಹತ್ತಿರ ಕುಳಿತಿದ್ದ ವ್ಯಕ್ತಿ ಹೇಳಿದರು: ''ನಿಮ್ಮ ಮೇಲೆ ದೇವನ ಶಾಂತಿ ಮತ್ತು ರಕ್ಷಣೆಯಿರಲಿ! ಇಬ್ರಾಹೀಮನಿಗೆ ಪ್ರತಿ ಸಲಾಮ್ ಹೇಳಲು ಸಾಧ್ಯವಾಗಲಿಲ್ಲ. ನೀರಿಲ್ಲದೆ ಆತನ ಗಂಟಲು ಒಣಗಿ ಹೋಗಿತ್ತು. ಮನೆಯ ಯಜಮಾನ ಸೇವಕನೊಂದಿಗೆ ಹಣ್ಣಿನ ರಸ ತರಲು ಆದೇಶಿಸಿದರು. ಸೇವಕ ತಂದ ಹಣ್ಣಿನ ರಸವನ್ನು ಇಬ್ರಾಹೀಮನಿಗೆ ಸ್ವತಃ ತಾವೇ ಕುಡಿಸಿದರು.



ಇಬ್ರಾಹೀಮನ ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿಯಿತು. ರುಚಿರುಚಿಯಾದ ತಿಂಡಿ ತಿನ್ನದೆ ಬಹಳಷ್ಟು ದಿನಗಳಾಗಿದ್ದವು. ಒಂದು ಒಳ್ಳೆಯ ಮಾತು ಕೂಡಾ ಆಲಿಸಿರಲಿಲ್ಲ. ಊರು, ಹೆಸರು ಸ್ಪಷ್ಟಪಡಿಸಲಾರದೆ ಜೀವರಕ್ಷಣೆಗಾಗಿ ಓಟ. ಆಗ ಮನೆಯ ಯಜಮಾನ ಪ್ರೀತಿಯಿಂದ ಇಬ್ರಾಹೀಮನ ತಲೆಕೂದಲುಗಳನ್ನು ನೇವರಿಸ ತೊಡಗಿದರು. ಸೇವಕನು ಹೊರ ಹೋದಾಗ ಅವರು ಕೇಳಿದರು: ''ಸಹೋದರಾ, ನಿನಗೇನಾಯಿತು.''

ಇಬ್ರಾಹೀಮನು ಶಬ್ದಗಳಿಗಾಗಿ ತಡಕಾಡಿದನು. ಮನೆಯ ಯಜಮಾನ ಹೇಳಿದರು: ''ನೀನು ಯಾವುದೋ ಒಂದು ಸಂಕಷ್ಟದಲ್ಲಿ ಸಿಲುಕಿದವನಂತೆ ಭಾಸವಾಗುತ್ತದೆ. ನನ್ನ ಮೇಲೆ ಭರವಸೆಯಿಡು. ನೀನು ಬಂದು ತಲುಪಿರುವುದು ಒಬ್ಬ ಅಸಹಾಯಕನ ಬಳಿಯಲ್ಲಲ್ಲ. ಹೆದರಬೇಡ. ಧೈರ್ಯವಾಗಿರು.''

ಆ ಮಾತುಗಳಿಂದ ಇಬ್ರಾಹೀಮನ ಮನಸ್ಸಿಗೆ ತುಂಬಾ ಸಮಾಧಾನವಾಯಿತು. ಇಬ್ರಾಹೀಮ್ ಮನೆಯ ಯಜಮಾನನ ಮಾತುಗಳನ್ನು ಆಲಿಸಿದನು: ''ಸರ್ವಶಕ್ತನಾದ ದೇವನು ತಮ್ಮನ್ನು ನನ್ನ ಬಳಿಗೆ ಕಳಿಸಿರುತ್ತಾನೆ. ಹೇಳು ನಾನೇನು ಸಹಾಯ ಮಾಡಲಿ.'' ಇಬ್ರಾಹೀಮ್ ಮಾತುಗಳಿಗಾಗಿ ತಡಕಾಡಿದ. ಆಗ ಮನೆ ಯಜಮಾನ ಹೇಳಿದರು: ''ನೀನು ಮೊದಲು ಸ್ನಾನ ಮಾಡಿ ಬಟ್ಟೆ ಬದಲಾಯಿಸು. ಈಗ ನಿನಗೆ ವಿಶ್ರಾಂತಿ ಬೇಕಾಗಿದೆ.

ಇಬ್ರಾಹೀಮ್ ತಣ್ಣೀರ ಸ್ನಾನ ಮಾಡಿದನು. ಅವರು ನೀಡಿದ ಬಟ್ಟೆ ಧರಿಸಿದನು. ಅವರ ಜೊತೆಯಲ್ಲಿ ಊಟ ಮಾಡಿ ನಿದ್ರಿಸಿದನು. ನಿದ್ದೆಯಿಂದ ಎಚ್ಚೆತ್ತಾಗ ಅವನ ಮುಂಭಾಗದಲ್ಲಿ ಮನೆಯ ಯಜಮಾನ ನಿಂತು ಮುಗುಳ್ನಗುತ್ತಿದ್ದಾರೆ. ಇಬ್ರಾಹೀಮ್ ಹೇಳಿದ: ''ನನ್ನ ಮನದಲ್ಲುಂಟಾದ ಸಂತೋಷ ಮತ್ತು ಕೃತಜ್ಞತೆಯ ಭಾಗವನ್ನು ದೇವನೇ ಬಲ್ಲ.''

''ಹೇಳು ಸಹೋದರಾ! ನನ್ನಿಂದ ಇನ್ನೇನು ಸಹಾಯ ಬೇಕು?'' ಇಬ್ರಾಹೀಮನು ಭಾವಪರವಶನಾಗಿ ''ಅಣ್ಣಾ, ನಾನು ಒಂದು ದೊಡ್ಡ ಅಪಾಯದಲ್ಲಿ ಸಿಲುಕಿದ್ದೇನೆ. ನನ್ನಿಂದ ಒಂದು ಪ್ರಮಾದವಾಗಿ ಬಿಟ್ಟಿದೆ. ನನ್ನ ಜೀವ ಈಗ ತಮ್ಮ ಕೈಗಳಲ್ಲಿದೆ'' ಎಂದರು.

ಮನೆಯ ಯಜಮಾನ ಇಬ್ರಾಹೀಮನ ತಲೆನೇವರಿಸುತ್ತಾ: ಸಹೋದರಾ, ದೇವನಿಚ್ಛಿಸಿದಂತೆಯೇ ಆಗಲಿ'' ಎಂದರು. ತರುವಾಯ ಬೇರೇನೂ ಪ್ರಶ್ನಿಸದೆ ಇಬ್ರಾಹೀಮನಿಗೆ ಒಂದು ಕೋಣೆಯನ್ನು ತೋರಿಸಿದರು. ''ನೀನು ಎಷ್ಟು ಕಾಲ ಬೇಕಾದರೂ ತಂಗಬಹುದು'' ಎನ್ನುತ್ತಾ ಅವರು ಸೇವಕನೊಂದಿಗೆ ''ಈ ವ್ಯಕ್ತಿ ಇಲ್ಲಿರುವ ವಿಚಾರ ನಮಗಿಬ್ಬರ ಹೊರತು ಬೇರೆ ಯಾರಿಗೂ ಗೊತ್ತಾಗಬಾರದು. ಒಂದು ವೇಳೆ ತಿಳಿಯುವುದಾದರೆ ಅದು ನಮ್ಮಿಬ್ಬರಲ್ಲಿ ಯಾರದಾದರೂ ಮೂಲಕ ಮಾತ್ರ. ನಮ್ಮ ಅತಿಥಿಗೆ ಯಾವುದೇ ರೀತಿಯ ತೊಂದರೆಯಾಗಬಾರದು'' ಎಂದು ಹೇಳಿದರು.

ನಂತರದ ದಿನಗಳು ಇಬ್ರಾಹೀಮನ ಪಾಲಿಗೆ ಸಂತೋಷದ ದಿನಗಳಾಗಿದ್ದವು. ಖಲೀಫನನ್ನು ಭೇಟಿಯಾಗಿ ತನ್ನ ಪ್ರಮಾದದ ಬಗ್ಗೆ ತಿಳಿಸಿ, ಅದಕ್ಕೆ ಕಾರಣವಾಗಿದ್ದ ಸಂದರ್ಭಗಳನ್ನು ತಿಳಿಸುವ ವರೆಗೆ ಇಬ್ರಾಹೀಮ್ ಅವಿತು ಕುಳಿತಿರಬೇಕಾದುದು ಅನಿವಾರ್ಯವಾಗಿತ್ತು.

ತನ್ಮಧ್ಯೆ ತನ್ನ ಯಜಮಾನನಲ್ಲಿ ವರ್ಧಿಸುತ್ತಿರುವ ಮಾನಸಿಕ ತುಮುಲಗಳನ್ನು ಇಬ್ರಾಹೀಮ್ ಗಮನಿಸತೊಡಗಿದ. ಅವರು ಪ್ರತಿ ದಿನವೂ ಪ್ರಭಾತದಲ್ಲಿ ಮನೆಯಿಂದ ಹೊರಟು, ಅತ್ಯಂತ ಸುಸ್ತಾಗಿ ರಾತ್ರಿ ಮರಳಿ ಬರುವುದನ್ನು ಅರ್ಥ ಮಾಡಿದನು. ಈ

ವ್ಯಕ್ತಿಯ ಸಂಕಷ್ಟಗಳಿಗೆ ತಾನು ಕಾರಣಕರ್ತನಾಗಿರುವೆನೋ ಎಂದು ಇಬ್ರಾಹೀಮ್ ಒಂದು ಬಾರಿ ಸಂಶಯ ಪಟ್ಟನು.

ಒಂದು ದಿನ ರಾತ್ರಿ ಹೂದೋಟದಲ್ಲಿ ಏಕಾಂತದಲ್ಲಿ ನಿಂತಿರುವ ಮನೆಯ ಯಜಮಾನನೊಂದಿಗೆ ಇಬ್ರಾಹೀಮ್ ವಿನಯದೊಂದಿಗೆ ಹೇಳಿದನು: ''ನಾನು ನಿಮಗೆ ಎಂದೆಂದಿಗೂ ಆಭಾರಿಯಾಗಿದ್ದೇನೆ.''

''ದೇವನಿಗೆ ಕೃತಜ್ಞತೆ ತೋರು'' ಎಂದು ನಗುತ್ತಾ ಹೇಳಿದರು.

ಇಬ್ರಾಹೀಮ್ ಕೇಳಿದನು: ''ನಾನೊಂದು ವಿಷಯ ಕೇಳಿದರೆ ಸತ್ಯ ಹೇಳಬಲ್ಲಿರಾ?''

''ಹೇಳು ಏನು ವಿಷಯ, ಸಂಕೋಚಪಡಬೇಡ ಕೇಳು.''

''ನಾನು ನಿಮ್ಮನ್ನು ತುಂಬಾ ದಿನಗಳಿಂದ ಗಮನಿಸುತ್ತಾ ಬಂದಿದ್ದೇನೆ. ನೀವು ಯಾವುದೋ ಒಂದು ಕಾರಣದಿಂದ ಅಸ್ವಸ್ಥರಾದಂತೆ ನನಗನಿಸುತ್ತದೆ.'' ಥಟ್ಟನೆ! ಅವರು ''ಏನಿಲ್ಲ'' ಎಂದು ಬಿಟ್ಟರು. ಆದರೆ ಸ್ವಲ್ಪ ಸಮಯ ಸುಮ್ಮನಿದ್ದು ನಂತರ ಇಬ್ರಾಹೀಮನನ್ನು ನೋಡುತ್ತಾ: ''ನಾನು ಸತ್ಯವೇನೆಂದು ಹೇಳದಿದ್ದರೆ ಅದು ನಿಮ್ಮಲ್ಲಿ ತಪ್ಪು ಭಾವನೆ ಉಂಟು ಮಾಡಬಹುದು. ನಿನ್ನ ಕಾರಣದಿಂದ ನಾನು ಹಾಗಾಗಿದ್ದೇನೆಂದು ಭಾವಿಸಬಹುದು. ತಮ್ಮಾ, ಕೆಲವು ದಿನಗಳ ಹಿಂದೆ ನನ್ನ ತಂದೆ ಕೊಲ್ಲಲ್ಪಟ್ಟಿದ್ದಾರೆ. ಆದರೆ ಕೊಂದ ವ್ಯಕ್ತಿಯನ್ನು ಹಿಡಿಯಲು ಯಾರಿಂದಲೂ ಸಾಧ್ಯವಾಗಲಿಲ್ಲ, ಆದರೆ ಈಗ ಅವನನ್ನು ಹೊಡುಕಿ ಕೊಟ್ಟವರಿಗೆ ನಾಲ್ಕು ಸಾವಿರ ದಿರ್ಹಮ್ ಬಹುಮಾನವಾಗಿ ಕೊಡಲಾಗುವುದೆಂದು ಖಲೀಫ ಘೋಷಿಸಿದ್ದಾರೆ.

''ಕೊಲೆಗಾರ ಎಲ್ಲಿದ್ದಾನೆ,'' ಕುತೂಹಲದಿಂದ ಇಬ್ರಾಹೀಮ್ ಕೇಳಿದನು.

''ಈಗ ಈ ಊರಲ್ಲೇ ಇದ್ದಾನೆಂದು ರಾಜರಿಗೆ ವಿವರ ಲಭಿಸಿದೆ. ಕೊಲೆಗಾರ ಯಾರು ಎಂಬುದು ಗೊತ್ತು. ನೋಡಿ ಪರಿಚಯವಿಲ್ಲದಿದ್ದರೂ ಸಂಶಯದ ಆಧಾರದಲ್ಲಿ ಹಿಡಿಯಲ್ಪಟ್ಟರೆ ಗುಪ್ತಚರರಿಗೆ ತಿಳಿಸೋಣವೆಂದು ಹಗಲು ಹೊತ್ತಿನಲ್ಲಿ ಊರಿಡೀ ಅಲೆದಾಡುತ್ತಿದ್ದೇನೆ. ನನ್ನ ತಂದೆಯೊಂದಿಗಿನ ಪ್ರೀತಿಯನ್ನು ನಾ ಹೇಗೆ ಮರೆಯಲಿ.'' ಮನೆಯ ಯಜಮಾನ ಸಂಕಟಪಟ್ಟರು.

ಇಬ್ರಾಹೀಮನ ಹೃದಯ ಕಂಪಿಸತೊಡಗಿತು. ತನ್ನನ್ನು ತಾನೇ ಸಮಾಧಾನ ಪಡಿಸುತ್ತಾ ಕೇಳಿದನು: ''ಕೊಲೆಗಾರ ಯಾರು?''

''ಇಬ್ರಾಹೀಮ್ ಎಂಬ ವ್ಯಕ್ತಿ.''

ಇಬ್ರಾಹೀಮನಿಗೆ ಒಂದು ನಿಮಿಷ ಹೃದಯ ಬಡಿತ ನಿಶ್ಚಲವಾದ ಅನುಭವ. ತೋಳನ ಬಾಯಿಂದ ತಪ್ಪಿಸಿ ಓಡಿ ಬಂದು ತಲುಪಿರುವುದು ಸಿಂಹದ ಗೂಡಿನೊಳಗಾಗಿತ್ತು. ಇಬ್ರಾಹೀಮನಿಗೆ ತನ್ನ ಮುಂದಿರುವ ವ್ಯಕ್ತಿಯೊಂದಿಗೆ

ವಿಷಯವನ್ನು ಅಡಗಿಸಿಡದಿರುವುದು ಕೃತಘ್ನತೆಯಾದೀತೆಂದು ತೋಚಿತು. ಇಬ್ರಾಹೀಮ್ ಸಾವಧಾನದಿಂದ ಹೇಳಿದ: ''ಅಣ್ಣಾ, ನನ್ನನ್ನು ಕ್ಷಮಿಸಿ. ನಿಮ್ಮ ತಂದೆಯನ್ನು ಪ್ರಮಾದವಶಾತ್ ಕೊಂದ ಪಾಪಿ ನಾನೇ.''

ಮನೆಯ ಯಜಮಾನನ ಮುಖದ ಬಣ್ಣ ಬದಲಾಯಿತು. ಅವರ ಹೃದಯದಲ್ಲಿ ಉಂಟಾದ ಕೋಲಾಹಲವನ್ನು ಅಡಗಿಸಲು ಪ್ರಯತ್ನಿಸುತ್ತಿದ್ದಾರೆ. ಇಬ್ರಾಹೀಮ್ ಹೇಳಿದ: ''ನನ್ನನ್ನು ಏನು ಬೇಕಾದರೂ ಮಾಡಿ. ನಾನದಕ್ಕೆ ಸಂಪೂರ್ಣ ಸಿದ್ಧನಾಗಿದ್ದೇನೆ. ಮನೆಯ ಯಜಮಾನ ಪೂರ್ವ ಸ್ಥಿತಿಗೆ ಮರಳಿ ''ಪರ್ವಾಗಿಲ್ಲ, ಪರ್ವಾಗಿಲ್ಲ, ನೀನು ಬೇರಾವುದೋ ಕಾರಣದಿಂದ ಇಲ್ಲಿಗೆ ಬಂದಿರುವುದು ತಾನೆ. ಪರ್ವಾಗಿಲ್ಲ'' ಎಂದು ಹೇಳುತ್ತಾ ಅಲ್ಲಿಂದ ಹೊರಟೇ ಬಿಟ್ಟರು. ಇಬ್ರಾಹೀಮನಿಗೆ ಈಗ ಖಚಿತವಾಗಿತ್ತು. ಅವರು ಈಗ ಗುಪ್ತಚರರನ್ನು ಕರೆದುಕೊಂಡು ಬರಲು ಹೋಗಿರಬಹುದು ಎಂದು ಭಾವಿಸಿದನು. ಇಬ್ರಾಹೀಮನಿಗೆ ಅಲ್ಲಿಂದ ಓಡಿ ಹೋಗಲು ಮನಸ್ಸಾಗಲಿಲ್ಲ, ಅವನು ಮನಸಾರೆ ತಪ್ಪೊಪ್ಪಿಕೊಳ್ಳಲು ಸಿದ್ಧನಾಗುತ್ತಾನೆ. ನಾಲ್ಕು ಸಾವಿರ ದಿರ್ಹಮ್ ಇವರಿಗೆ ಸಿಗಲಿ'' ಎಂದು ಇಬ್ರಾಹೀಮ್ ಯೋಚಿಸತೊಡಗಿದನು.

ಅಷ್ಟು ಹೊತ್ತಿಗೆ ಮನೆಯ ಯಜಮಾನ ಅವನ ಬಳಿಗೆ ಬಂದರು. ಅವರ ಒಂದು ಕೈಯಲ್ಲಿ ತುಂಬಿದ ಚೀಲವೊಂದಿತ್ತು. ಆ ಚೀಲವನ್ನು ಇಬ್ರಾಹೀಮನ ಕೈಗೆ ಕೊಡುತ್ತಾ'' ಸಹೋದರಾ, ಇದರಲ್ಲಿ ಅತ್ಯವಶ್ಯಕ ಬಟ್ಟೆಬರೆಗಳಿವೆ. ಯಾತ್ರೆಗೆ ಬೇಕಾದ ಸ್ವಲ್ಪ ಹಣವೂ ಇದೆ'' ಎಂದು ಹೇಳಿದರು. ಇವರು ಏನು ಹೇಳುತ್ತಿರುವುದೆಂದು ಇಬ್ರಾಹೀಮನಿಗೆ ಅರ್ಥವಾಗಲಿಲ್ಲ, ಆಗ ಮನೆಯ ಯಜಮಾನ ಹೇಳಿದರು: ''ದಯಮಾಡಿ ಸುರಕ್ಷಿತವಾದ ಇನ್ನೊಂದೆಡೆಗೆ ಹೊರಟು ಹೋಗಿರಿ. ಭಾವಾವೇಶದಿಂದ ನಾನೇನಾದರೂ ಮಾಡಿದರೆ ಅಥವಾ ಯಾರಿಗಾದರೂ ವಿಷಯ ತಿಳಿಸಿದರೆ ಅದು ವಾಗ್ದಾನ ಮುರಿದಂತಾಗುವುದು. ಅಭಯ ಕೋರಿ ಬಂದವನು ಶತ್ರುವಾಗಿದ್ದರೂ ಅವನಿಗೆ ಯಾವುದೇ ರೀತಿಯ ತೊಂದರೆ ಉಂಟಾಗಬಾರದೆಂಬುದೇ ನನ್ನ ತಂದೆಯ ಉಪದೇಶ. ದಯಮಾಡಿ ಕೂಡಲೇ ಇಲ್ಲಿಂದ ಹೊರಟು ಹೋಗು.....''

ಇಬ್ರಾಹೀಮ್ ಮನೆಯ ಯಜಮಾನನಲ್ಲಿ ಕ್ಷಮೆ ಯಾಚಿಸಿ ಹೊರಟು ಹೋಗುತ್ತಾನೆ.

---

● ಖಲೀಫ ಅಬುಲ್ ಅಸ್ಸಫಾಹ್(749-754) ಅಬ್ಬಾಸಿ ರಾಜವಂಶದ ಸ್ಥಾಪಕ-ಕೂಫಾದ ಹತ್ತಿರವಿರುವ ಹಾಶಿಮಿಯ್ಯ ಅದರ ರಾಜಧಾನಿಯಾಗಿತ್ತು.

## 3. ದಿವ್ಯಬೋಧನೆಯಿಂದ ಮನಃಪರಿವರ್ತನೆ

ಇಮಾಮ್ ಅಬೂ ಹನೀಫ ಪ್ರಮುಖ ವಿದ್ವಾಂಸರಲ್ಲಿ ಒಬ್ಬರಾಗಿದ್ದಾರೆ. ಅವರನ್ನು ಬಗ್ದಾದಿನ ಜನರೂ ಹತ್ತಿರದ ಪ್ರದೇಶದವರೂ ಅತ್ಯಧಿಕ ಗೌರವಿಸುತ್ತಿದ್ದರು. ಆದರೆ ಇಮಾಮರು ಮಾತ್ರ ಸರಳ ಜೀವನವನ್ನು ಇಷ್ಟ ಪಟ್ಟರು. ಸರಕಾರ ನೀಡಿದ್ದ ಉದ್ಯೋಗಗಳನ್ನು ತಿರಸ್ಕರಿಸಿ ಸಾಮಾನ್ಯ ವ್ಯಕ್ತಿಗಳು ವಾಸಿಸುತ್ತಿದ್ದಂತಹ ಒಂದು ಕಡೆ ಸಣ್ಣ ಮನೆಯಲ್ಲಿ ವಾಸವಾಗಿದ್ದರು. ಜ್ಞಾನ ಸಂಪಾದನೆ, ಪ್ರಾರ್ಥನೆ ಹಾಗೂ ಧ್ಯಾನ ಎಂಬಿತ್ಯಾದಿ ಕೆಲಸಗಳಿಗಾಗಿ ತನ್ನ ಸಮಯವನ್ನು ಮೀಸಲಿಟ್ಟಿದ್ದರು. ಇಮಾಮರನ್ನು ನೋಡಲು, ಅವರಿಂದ ಜ್ಞಾನವನ್ನು ಸಂಪಾದಿಸಲು ದೂರ ದೂರದ ಪ್ರದೇಶಗಳಿಂದ ಜನರು ಆಗಮಿಸುತ್ತಿದ್ದರು.

ಇಮಾಮರು ಅಗತ್ಯ ಕೆಲಸಕ್ಕಾಗಿ ಮಾತ್ರ ಹೊರ ಹೋಗುತ್ತಿದ್ದರು. ಕಾರ್ಯಕ್ರಮಗಳಲ್ಲಾಗಲೀ ಸಮಾರಂಭಗಳಲ್ಲಾಗಲೀ ಭಾಗವಹಿಸುತ್ತಿರಲಿಲ್ಲ, ಇದರಿಂದ ಜನರಿಗೆ ಇಮಾಮರ ಮೇಲಿದ್ದ ಗೌರವ ಕಡಿಮೆಯಾಗಿರಲಿಲ್ಲ, ಅವರು ಸ್ವತಃ ಇಮಾಮರ ಬಳಿಗೆ ಬರುತ್ತಿದ್ದರು. ಆದರೆ.... ಅಲ್ಲಿ ಇಮಾಮರನ್ನು ಒಮ್ಮೆಯೂ ನೋಡದ, ಅವರ ಕಡೆಗೆ ಗಮನ ಹರಿಸದೇ ಇದ್ದ ಒಬ್ಬ ವ್ಯಕ್ತಿಯಿದ್ದ. ಅವರು ಅವರ ನೆರೆಕರೆಯವನಾದ ಒಬ್ಬ ಚಮ್ಮಾರ. ಅವನೊಬ್ಬ ಸಮರ್ಥ ಚಮ್ಮಾರನಾಗಿದ್ದ. ಹಗಲಿಡೀ ದುಡಿಮೆ. ಅತ್ಯಂತ ಸುಂದರವಾಗಿ, ಕಲಾತ್ಮಕವಾಗಿ ಚಪ್ಪಲಿಗಳನ್ನು ತಯಾರಿಸುತ್ತಿದ್ದನು. ಆದ್ದರಿಂದ ಅವನು ತಯಾರಿಸಿದ ಚಪ್ಪಲಿಗೆ ಅತಿ ಹೆಚ್ಚು ಬೇಡಿಕೆ ಇತ್ತು. ಎಷ್ಟು ಬೆಲೆ ತೆತ್ತಾದರೂ ಜನರು ಖರೀದಿಸಲು ಅವನ ಬಳಿಗೆ ಬರುತ್ತಿದ್ದರು. ಆದರೆ,.... ರಾತ್ರಿಯಾಯಿತೆಂದರೆ ಚಮ್ಮಾರ ಸಂಪೂರ್ಣ ಬದಲಾಗಿ ಬಿಡುತ್ತಾನೆ. ಮದ್ಯಪಾನ ಅವನ ನಿತ್ಯದ ರೂಢಿ. ಕಂಠಪೂರ್ತಿ ಕುಡಿದು ರಾತ್ರಿಯಿಡೀ ಬೀದಿಗಳಲ್ಲಿ ಬೊಬ್ಬಿಡುತ್ತಾ, ಜಗಳ ಮಾಡುತ್ತಾ ನಡೆಯುತ್ತಾನೆ. ತನ್ನ ಅಸಭ್ಯ ಮಾತು ಹಾಗೂ ಹಾಡುಗಳಿಂದ ಜನರ ನಿದ್ದೆಗೆಡಿಸುತ್ತಿದ್ದನು. ಅವನು ಇಮಾಮರ ಮನೆಗೆ ಕಾಲಿಡದಿದ್ದರೂ ಅವನ ಶಬ್ದವು ಎಲ್ಲವನ್ನೂ ಭೇದಿಸಿ ಅಲ್ಲಿಗೆ ಕೇಳಿಸುತ್ತಿತ್ತು. ಅದು ಅಭ್ಯಾಸವಾಗಿ ಬಿಟ್ಟಿತ್ತು. ಎಷ್ಟೋ ಬಾರಿ ಇಮಾಮರ ಪ್ರಾರ್ಥನೆಯನ್ನೂ ಧ್ಯಾನವನ್ನೂ

ಭಂಗಗೊಳಿಸಿತ್ತು. ಆದರೆ ಇಮಾಮರು ಎಂದೂ ಅವನ ಮೇಲೆ ಕೋಪಗೊಳ್ಳಲೂ ಇಲ್ಲ, ಯಾರಲ್ಲೂ ದೂರಿಕೊಳ್ಳಲೂ ಇಲ್ಲ, ಉಪದೇಶ ನೀಡಲೂ ಇಲ್ಲ.

ಒಂದು ರಾತ್ರಿ ಚಮ್ಮಾರನ ಶಬ್ದ ಕೇಳಿಸುತ್ತಿಲ್ಲ. ಇದರಿಂದ ಇಮಾಮರು ಕಳವಳಗೊಂಡರು. ಚಮ್ಮಾರನಿಗೆ ಏನಾದರೂ ಆಗಿರಬಹುದೆಂದು ಭಾವಿಸಿದರು.

ಅನಂತರ ಇಮಾಮರಿಗೆ ಅಲ್ಲಿ ನಿಲ್ಲಲಾಗಲಿಲ್ಲ. ಮನೆಯಿಂದ ಹೊರಗಿಳಿದರು. ಚಮ್ಮಾರನ ಮನೆಯಲ್ಲಿ ಯಾರೂ ಕಾಣುವುದಿಲ್ಲ. ರಸ್ತೆಗಳಲ್ಲಿ ಎಲ್ಲಿಯೂ ಅವನಿಲ್ಲ. ಹೇಗೂ ಆ ರಾತ್ರಿಯನ್ನು ಇಮಾಮರು ಕಳೆದರು.

ಮರುದಿನ ಪ್ರಭಾತೋದಯವಾದಾಗ ಇಮಾಮರು ಮನೆಯಿಂದ ಹೊರನಡೆದರು. ಚಮ್ಮಾರನಿಗಾಗಿ ಹುಡುಕಾಟ ನಡೆಸಿದರು. ಅದಾಗಲೇ ಚಮ್ಮಾರನನ್ನು ಬಂಧಿಸಲಾಗಿದೆಯೆಂಬ ಸುದ್ದಿ ಇಮಾಮರಿಗೆ ತಿಳಿಯುತ್ತದೆ. ಇಮಾಮರು ಒಂದು ಕ್ಷಣವೂ ಅಲ್ಲಿ ನಿಲ್ಲದೆ ಖಲೀಫ ಮನ್ಸೂರರ ಅರಮನೆಗೆ ಹೊರಟರು. ಇಮಾಮರು ಎಂದೂ ಖಲೀಫರನ್ನು ನೋಡಲು ಅಲ್ಲಿಗೆ ಹೋದವರಲ್ಲ. ಅಂತಹ ಇಮಾಮರ ಆಗಮನವನ್ನು ಕಂಡು ಅರಮನೆಯ ಕಾವಲು ಭಟರು ಆಶ್ಚರ್ಯಪಟ್ಟರು. ತಮಗರಿವಿಲ್ಲದೆಯೇ ಅರಮನೆ ದ್ವಾರವನ್ನು ತೆರೆದುಕೊಟ್ಟರು.

ಇಮಾಮರು ಯಾರನ್ನೂ ಗಮನಿಸಲಿಲ್ಲ. ಉದ್ಯಾನಗಳಲ್ಲಿರುವವರೆಲ್ಲರೂ ಅವರನ್ನು ಗಮನಿಸುತ್ತಿದ್ದಾರೆಂಬುದನ್ನೂ ಅವರು ಗಣನೆಗೆ ತೆಗೆದುಕೊಳ್ಳಲಿ. ಭಾರವಾದ ಹೆಜ್ಜೆಗಳನ್ನಿಡುತ್ತಾ ನೇರವಾಗಿ ಖಲೀಫರ ಬಳಿಗೆ ಹೋದರು. ಇಮಾಮರನ್ನು ಕಂಡ ಖಲೀಫ ಮನ್ಸೂರ್ ಸಿಂಹಾಸನದಿಂದ ಸ್ವತಃ ತಾವೇ ಇಳಿದು ಬಂದರು. ಖಲೀಫರಿಗೆ ತನ್ನ ಕಣ್ಣುಗಳನ್ನೇ ನಂಬಲಾಗುತ್ತಿಲ್ಲ. ಎಷ್ಟೋ ಸಾರಿ ಆಮಂತ್ರಣ ನೀಡಿದರೂ ಹುದ್ದೆಗಳನ್ನು ತೋರಿಸಿದರೂ ಒಂದು ಬಾರಿ ಕೂಡ ಅರಮನೆಗೆ ಕಾಲಿರಿಸದ ಇಮಾಮರ ಆಗಮನವನ್ನು ಕಂಡು ಖಲೀಫ ಆನಂದ ತುಂದಿಲರಾದರು. ಬಹಳ ಗೌರವದೊಂದಿಗೆ ಸ್ವಾಗತಿಸುತ್ತಾ, ವಿಶಿಷ್ಟ ಪೀಠದಲ್ಲಿ ಕುಳಿತುಕೊಳ್ಳಲು ವಿನಂತಿಸಿದರು. ಆದರೆ ಇಮಾಮರು ಅದನ್ನು ನಯವಾಗಿ ತಿರಸ್ಕರಿಸಿದರು.

''ಮಹಾನುಭಾವರೇ, ನಮ್ಮ ಸಾಮ್ರಾಜ್ಯವು ಇಂದು ಅನುಗ್ರಹೀತವಾಗಿದೆ. ನಿಮ್ಮ ಸಾನ್ನಿಧ್ಯದಿಂದ ಒಮ್ಮೆಯಾದರೂ ನಮ್ಮ ಅರಮನೆ ಪ್ರಕಾಶಮಾನವಾಗಲೆಂದು ಸದಾ ಪ್ರಾರ್ಥಿಸುತ್ತಿದ್ದೆನು. ದೇವನಿಗೆ ನಾವು ಕೃತಜ್ಞರಾಗಿದ್ದೇವೆ.''

ಇಮಾಮರು ಆ ಮಾತನ್ನು ಗಮನಿಸಲಿಲ್ಲ. ಅವರು ಕೇಳಿದರು: ''ನಿನ್ನೆ ರಾತ್ರಿ ನಿಮ್ಮ ಸೈನಿಕರು ಬಂಧಿಸಿದವರಲ್ಲಿ ಒಬ್ಬ ಚಮ್ಮಾರನಿದ್ದಾನೆಯೇ?''

''ಅದನ್ನು ತಿಳಿಯಲಿಕ್ಕೋಸ್ಕರ ಯಾಕಿಷ್ಟು ಸಂಕಟ?''

ಖಲೀಫ ಸೇನಾ ಮುಖಂಡನನ್ನು ಕರೆಸಿದರು. ಬಂದೀಖಾನೆಯಲ್ಲಿರುವವರ ಹೆಸರು, ವಿಳಾಸಗಳನ್ನು ತಿಳಿಸಲು ಆದೇಶಿಸಿದರು. ತನ್ಮಧ್ಯೆ ಖಲೀಫ ಇಮಾಮರೊಂದಿಗೆ ಬೇರೆ ಬೇರೆ ವಿಷಯಗಳನ್ನು ಕೇಳಿದರೂ ಯಾವುದಕ್ಕೂ ಉತ್ತರವಿಲ್ಲ. ಅಷ್ಟು ಹೊತ್ತಿಗೆ ಸೇನಾಮುಖಂಡ ಬಂದು ಚಮ್ಮಾರನ ಇರುವಿಕೆಯನ್ನು ತಿಳಿಸಿದನು.

''ಅವನ ಮೇಲೆ ಇರುವ ಆರೋಪವಾದರೂ ಏನು?'' ಖಲೀಫ ಕೇಳಿದರು.

''ಮಹಾರಾಜರೇ, ಅವನು ಮದ್ಯಪಾನ ಮಾಡುವುದರಿಂದ ಅವನ ನೆರೆಕರೆಯವರು, ರಸ್ತೆಗಳಲ್ಲಿರುವವರು ಅವನ ಕಿರುಕುಳದಿಂದ ಸುರಕ್ಷಿತರಲ್ಲ.''

ಇಮಾಮರು ಹೇಳಿದರು: ''ನಾನು ಅವನ ನೆರೆಕರೆಯವನು.''

''ಹೇಳಿ, ತಮಗೆ ನೀಡಲಾದ ಕಿರುಕುಳಕ್ಕೆ ಯಾವ ಶಿಕ್ಷೆ ವಿಧಿಸಬೇಕೆಂದು ತಾವು ಆದೇಶಿಸುತ್ತೀರಿ....'' ಖಲೀಫ ಕೇಳಿಕೊಂಡರು.

''ನನ್ನಿಷ್ಟದಂತೆ ನಡೆಯುವುದೇ?''

''ಖಂಡಿತ, ಆ ಪಾಪಿಗೆ ತಾವು ಹೇಳುವ ಶಿಕ್ಷೆ ವಿಧಿಸುತ್ತೇನೆ.''

''ಮಹಾತ್ಮರೆ! ಅವನು ಪಾಪಿಯಲ್ಲ, ಅವನೊಬ್ಬ ಅಮಾಯಕ ವ್ಯಕ್ತಿ.''

''ಅವನು ಮದ್ಯಪಾನ ಮಾಡಿ ತಮಗೂ ತೊಂದರೆ ಕೊಡಲಿಲ್ಲವೇ?''

''ಹೌದು, ಅವನು ಮದ್ಯಪಾನ ಮಾಡಿ, ಪ್ರಜ್ಞಾಹೀನನಾಗಿ ಬೊಬ್ಬಿಡುತ್ತಾನೆ.... ಆದರೆ....ಆದರೆ, ನಾನು. ಅವನನ್ನು ಬಂಧಮುಕ್ತಗೊಳಿಸಲಿಕ್ಕಾಗಿ ಬಂದಿರುವುದು.'' ಇಮಾಮರು ನಯವಾಗಿ ಉತ್ತರಿಸಿದರು.

''ಇವನು ನಿಮ್ಮ ನೆರೆಕರೆಯವನು ತಾನೆ?'' ಖಲೀಫರ ಮರು ಪ್ರಶ್ನೆ.

''ಇವನ ಮನೆಯಲ್ಲಿ ಒಂದು ಎಲೆ ಅಲುಗಾಡಿದರೂ ನನಗೆ ಕೇಳಿಸುತ್ತದೆ.''

''ಮದ್ಯಕುಡಿದು ಬೊಬ್ಬಿಡದ ಒಂದು ರಾತ್ರಿಯಾದರೂ ಇದೆಯೇ. ಇಮಾಮರೇ?''

''ನಿನ್ನೆ ರಾತ್ರಿಯೊಂದನ್ನು ಬಿಟ್ಟರೆ ಬೊಬ್ಬಿಡದ ಒಂದು ರಾತ್ರಿಯೂ ಕಳೆದಿರಲಿಲ್ಲ.''

''ಹಾಗಾದರೆ ತಮ್ಮ ಸ್ವಾಸ್ಥ್ಯವನ್ನು ಕೆಡಿಸುತ್ತಿದ್ದ ಅವನನ್ನು ಬಂಧಮುಕ್ತ ಗೊಳಿಸಬೇಕೆಂದು ತಾವು ಹೇಳುವುದೇ?'' ಖಲೀಫ ಆಶ್ಚರ್ಯದಿಂದ ಪ್ರಶ್ನಿಸಿದರು.

''ಮಹಾತ್ಮರೆ, ಅವನು ಪುನಃ ಮದ್ಯಪಾನ ಮಾಡಬೇಕೆ? ಅಥವಾ ಮದ್ಯಪಾನದಿಂದ ಮುಕ್ತನಾಗಬೇಕೆ?'' ಇಮಾಮರು ಮರು ಪ್ರಶ್ನಿಸಿದರು.

ಖಲೀಫ ಸುಮ್ಮನಾದರು. ಇಮಾಮರು ಪುನಃ ಹೇಳಿದರು: ''ಅವನನ್ನು ನನಗೆ ಬಿಟ್ಟುಕೊಡಿ.''

''ಇದೋ, ನಾವು ಅವನನ್ನು ಬಂಧನದಿಂದ ಮುಕ್ತಗೊಳಿಸುತ್ತಿದ್ದೇವೆ.''

ಚಮ್ಮಾರನನ್ನು ಸಭೆಗೆ ತರಲಾಯಿತು. ಇಮಾಮರು ಅವನಿಗೆ ಹಸ್ತಲಾಘವ ಮಾಡಿದರು. ಅವನಾದರೋ ತಲೆತಗ್ಗಿಸಿ ನಿಂತಿದ್ದಾನೆ. ಇಮಾಮರು ಅವನ ಜೊತೆಯಲ್ಲಿ ಹೊರಹೋಗಲು ಅನುಮತಿ ಕೋರಿ ಅಲ್ಲಿಂದ ಹೊರನಡೆದರು. ಎಲ್ಲರೂ ನೋಡುತ್ತಿದ್ದಂತೆಯೇ ಇಮಾಮರು ಚಮ್ಮಾರನ ಕೈಹಿಡಿದು ಎಲ್ಲರಿಗೂ ಅಭಿನಂದನೆ ಸಲ್ಲಿಸುತ್ತಾ ದರಬಾರಿನಿಂದ ಹೊರ ಬಂದರು. ರಸ್ತೆ ಬದಿಗಳಲ್ಲಿರುವವರು ಈ ದೃಶ್ಯವನ್ನು ಕಂಡು ಬೆರಗಾದರು. ಇಮಾಮರು ಅವನೊಂದಿಗೆ ಮದ್ಯಪಾನದ ಬಗ್ಗೆ ಒಂದು ಮಾತೂ ಆಡಲಿಲ್ಲ, ಆದರೆ..... ಚಮ್ಮಾರ ಮಾತ್ರ ಅಂದಿನಿಂದ ಒಮ್ಮೆಯೂ ಮದ್ಯಪಾನ ಮಾಡಲಿಲ್ಲ.

• ಇಮಾಮ್ ಅಬೂಹನೀಫ 700ರಲ್ಲಿ ಕೂಫಾದಲ್ಲಿ ಜನಿಸಿದರು. ಖಲೀಫ ಮನ್ಸೂರರ(754-775) ಮುಖ್ಯ ನ್ಯಾಯಾಧೀಶ ಪದವಿಯನ್ನು ತಿರಸ್ಕರಿಸಿದರು. ಮುಸ್ಲಿಮರ ಪೈಕಿ ಅತ್ಯಧಿಕ ಮಂದಿ ಹನಫೀ ಮದಹಬನ್ನೇ ಅನುಕರಿಸುತ್ತಾರೆ.

## 4. ಪ್ರತ್ಯುಪಕಾರ

ಅಬೂ ಖಾಲಿದ್ ಖಲೀಫ ಮಹ್ದಿಯ ಮುಖ್ಯ ಮಂತ್ರಿಯಾಗಿದ್ದರು. ಒಮ್ಮೆ ಯಹ್ಯಾ ಎಂಬ ವ್ಯಕ್ತಿ ಅಬೂಖಾಲಿದ್‌ರೊಂದಿಗೆ ತನ್ನ ಸಂಕಟವನ್ನು ಹೀಗೆ ತೋಡಿಕೊಂಡನು. ''ನಾನು ಒಂದು ಕಾಲದಲ್ಲಿ ಎಲ್ಲರಿಂದಲೂ ಗೌರವಕ್ಕೆ ಅರ್ಹವಾಗಿದ್ದ ಒಂದು ಸಂಪನ್ನ ಕುಟುಂಬದಲ್ಲಿ ಜನಿಸಿದವನು. ತಂದೆಯ ಮರಣಾನಂತರ ಎಲ್ಲವೂ ಅಳಿದು ಹೋಗಿದೆ. ದಾರಿದ್ರ್ಯದಿಂದಾಗಿ ಅಸಹನೀಯ ಸಂಕಷ್ಟಗಳನ್ನು ನಾವಿಂದು ಅನುಭವಿಸುತ್ತಿದ್ದೇವೆ.'' ಅಬೂ ಖಾಲಿದ್ ಅವನನ್ನು ದಿಟ್ಟಿಸಿ ನೋಡಿದರು.



ಯಹ್ಯಾ ಮುಂದುವರಿಸಿದ: ''ನನ್ನ ತಂದೆ ಮತ್ತು ಹಿರಿಯರು ಈ ದೇಶಕ್ಕಾಗಿ ತ್ಯಾಗ ಮಾಡಿದವರಾಗಿದ್ದಾರೆ. ನನ್ನ ತಂದೆ ಖಲೀಫರ ಸೇನಾಧಿಕಾರಿಯಾಗಿದ್ದರು.''

ಅಬೂ ಖಾಲಿದನ ಮುಖಭಾವದಲ್ಲಿ ಯಾವುದೇ ವ್ಯತ್ಯಾಸ ಉಂಟಾಗಲಿಲ್ಲ. ಅವರು ಒಂದು ಮಾತನ್ನೂ ಹೇಳದೆ ಅಲ್ಲಿಂದೆದ್ದು ಹೊರಟು ಹೋದರು. ಯಹ್ಯಾ ಬೇಸರದಿಂದ ಹಿಂತಿರುಗಿದನು. ಅವನ ಕುಟುಂಬದವರು ಈ ವಿಷಯವನ್ನು ಕೇಳಿ ಬಹಳ ನೊಂದು ಕೊಂಡರು. ಇದ್ದ ಗೌರವವೂ ಹೊರಟು ಹೋಯಿತೆಂದು ಅವರು ಭಾವಿಸಿದರು. ಯಹ್ಯಾ ಇನ್ನಷ್ಟು ಇಳಿದು ಹೋದನು. ಕೆಲಸವಿಲ್ಲ ನನ್ನಲ್ಲಿ ಜ್ಞಾನ ಶಕ್ತಿ ಇದೆ ಎಂದು ಹೇಳಿ ಏನು ಪ್ರಯೋಜನ? ನಾನು ಇಂದು ಯಾವುದಕ್ಕೂ ಸಲ್ಲದವನು.

ದುಃಖಾತಿರೇಕದಿಂದ ಆ ರಾತ್ರಿಯಿಡೀ ಆತನಿಗೆ ನಿದ್ರೆ ಬರಲಿಲ್ಲ. ಪ್ರಭಾತೋದಯವಾದಾಗ ಯಾರೋ ಬಾಗಿಲು ತಟ್ಟಿದ ಶಬ್ದ ಕೇಳಿಸಿತು. ಯಹ್ಯಾ ನಿದ್ರಿಸದೆ ಕುಳಿತಿದ್ದ, ಅವನು ಬಾಗಿಲು ತೆರೆದಾಗ ಎದುರಿನಲ್ಲಿ ಮಂತ್ರಿಯ ದೂತನು ನಿಂತಿದ್ದಾನೆ. ''ನಿಮ್ಮ ಮೇಲೆ ದೇವನ ಕೃಪೆಯಿರಲಿ.'' ದೂತ ಸಲಾಮ್ ಹೇಳಿದಾಗ ಯಹ್ಯಾ ಅದಕ್ಕೆ ಪ್ರತಿಸಲಾಮ್ ಹೇಳಿ ವಂದಿಸಿದನು. ದೂತ ಹೇಳಿದ: ''ತಾವು ಯಹ್ಯಾ ಎಂದಾಗಿದ್ದರೆ ಸನ್ಮಾನ್ಯ ಮಂತ್ರಿಯಿಂದ ಬಂದ ಸಂದೇಶವನ್ನು ಪಡೆಯಬೇಕು.'' ಯಹ್ಯಾ ಸುತ್ತೋಲೆಯನ್ನು ತೆರೆದು ನೋಡಿದಾಗ ಅವನಿಗೆ ಆಶ್ಚರ್ಯವಾಯಿತು. ಆದಷ್ಟು ಬೇಗ ಯಹ್ಯಾ ಮಂತ್ರಿಯನ್ನು ಭೇಟಿಯಾಗಬೇಕೆಂಬ ಸಂದೇಶ ಅದರಲ್ಲಿತ್ತು. ಮನೆಯವರಲ್ಲಿ ಒಬ್ಬರು, 'ಪುನಃ ಅಪಮಾನಿತನಾಗುವೆ' ಎಂದು ಯಹ್ಯಾನನ್ನು ಎಚ್ಚರಿಸಿದರು. ಅಲ್ಲಾಹನು ಹಾಗೆಯೇ ಆಗಬೇಕೆಂದು ತೀರ್ಮಾನಿಸಿದ್ದರೆ ಹಾಗೆಯೇ ಆಗಲಿ ಎಂದವನು ಭಾವಿಸಿದ. ತರುವಾಯ ಅಬೂ ಖಾಲಿದ್‌ರ ಬಳಿಗೆ ಹೋದನು. ''ಯಹ್ಯಾ, ನಿಮ್ಮ ಮತ್ತು ನಿಮ್ಮ ಮನೆಯವರ ಬಗ್ಗೆ ನಾನು ಕೇಳಿ ತಿಳಿದಿರುವೆನು. ಖಂಡಿತವಾಗಿಯೂ ನೀವೊಬ್ಬ ಸಮರ್ಥ ಅಧಿಕಾರಿಯಾಗಬಲ್ಲಿರಿ. ಇದೋ, ಕೂಫಾ ನಗರದ ಗವರ್ನರ್ ಆಗಿ ನೇಮಕಾತಿಯಾದ ಖಲೀಫರ ಆಜ್ಞೆಯನ್ನು ಪಡೆದುಕೊಳ್ಳಿ.'' ಯಹ್ಯಾನಿಗೆ ನಂಬಲಾಗಲಿಲ್ಲ, ಕಣ್ಣುಗಳು ತೇವಗೊಂಡವು. ಯಹ್ಯಾ ಮಂತ್ರಿಗೆ ಕೃತಜ್ಞತೆಯನ್ನರ್ಪಿಸಿ ಮನೆಗೆ ಮರಳಿದ ನಂತರ ಕೂಫಾದ ಗವರ್ನರ್ ಆಗಿ ಕೆಲಸಕ್ಕೆ ಸೇರಿಕೊಂಡನು.

ಯಹ್ಯಾ ಸಮರ್ಥ ನಾಯಕನಾಗಿ ಹೆಸರುವಾಸಿಯಾದ. ಯಹ್ಯಾನ ಕೆಲಸದಲ್ಲಿನ ಉತ್ಸಾಹ ಮತ್ತು ಕಾರ್ಯಕ್ಷಮತೆಯನ್ನು ಮೀರಿಸುವಂತಹ ಬೇರೆ ಅಧಿಕಾರಿಗಳಿರಲಿಲ್ಲ, ವರ್ಷಗಳು ಉರುಳಿದವು. ಒಂದು ದಿನ ಯಹ್ಯಾನನ್ನು ಭೇಟಿಯಾಗಲು ಒಬ್ಬ ಯುವಕ ಬಂದನು. ಗವರ್ನರ್‌ನನ್ನು ನೋಡುತ್ತಾ ಹೇಳಿದ:

''ನನ್ನ ಹೆಸರು ಅಹ್ಮದ್. ನಾನು ಸಂಕಷ್ಟಗಳನ್ನು ಅನುಭವಿಸುತ್ತಿರುವ ಒಂದು ಕುಟುಂಬದ ಏಕೈಕ ಆಸರೆಯಾಗಿದ್ದೇನೆ. ತಂದೆಯ ಆಕಸ್ಮಿಕ ಮರಣದಿಂದಾಗಿ ಎಲ್ಲ ಹೊಣೆಗಾರಿಕೆಗಳೂ ನನ್ನ ಮೇಲೆ ಬಂದಿದೆ.'' ಯಹ್ಯಾ ಕೇಳಿದರು: ''ಏನು ಬೇಕೆಂದು ಹೇಳಿ.''

ಬೇರೆಯವರು ನಮ್ಮ ಸಂಕಟವನ್ನು ತಿಳಿದಿಲ್ಲ ಎಂಬುದು ಅತ್ಯಂತ ದುಃಖದ ಸಂಗತಿ. ನನ್ನ ತಂದೆಯವರು ಅಧಿಕಾರಿಯಾಗಿದ್ದಾಗ ಅಕ್ರಮವಾಗಿ ಒಂದು ಚಿಕ್ಕಾಸೂ ಸಂಪಾದನೆ ಮಾಡಿರಲಿಲ್ಲ, ಅವರು ನನಗೆ ನೀಡಿದ ಸದ್ಗುಣಗಳಿಗಾದರೋ ಇಂದು ಯಾವ ಬೆಲೆಯೂ ಇಲ್ಲ'' ಯುವಕ ಹೇಳಿದ. ಯಹ್ಯಾ ಅವನನ್ನೇ ನೋಡಿದರು. ಅಹ್ಮದ್ ಮುಂದುವರಿಸಿದ: ''ಒಂದು ಉದ್ಯೋಗ ಲಭಿಸಿದರೆ ನನ್ನ ಕುಟುಂಬದವರನ್ನು ಸಾಕಬಹುದು.'' ಯಹ್ಯಾ ಕೇಳಿದರು: ''ನಿನ್ನ ತಂದೆಯ ಹೆಸರೇನು?'' ''ಅಬೂಖಾಲಿದ್'' ಯುವಕ ಹೇಳಿದ.

ಯಹ್ಯಾ: ''ಖಲೀಫಾ ಮಹ್ದಿಯ ಮಂತ್ರಿಯಾಗಿದ್ದರೇ? ಯುವಕ ತಲೆ ತಗ್ಗಿಸಿದ ಯಹ್ಯಾ ಪುನಃ ಪ್ರಶ್ನಿಸಿದರು: ''ಹೇಳು, ನಾನು ಕೇಳಿದ್ದು ಸರಿಯೇ?''

''ಮಾನ್ಯರೇ, ಹೌದು, ನಾನು ಅವರ ಹತಭಾಗ್ಯ ಮಗನಾಗಿದ್ದೇನೆ.''

ಯಹ್ಯಾರ ಮುಖಭಾವದಲ್ಲಿ ಯಾವುದೇ ಬದಲಾವಣೆಯಾಗಲಿಲ್ಲ, ಅವರು ಒಂದು ಕೋಣೆಯೊಳಗೆ ಹೋದರು. ಮಗನನ್ನು ಕರೆದು: ''ಮಗನೇ, ಹೊರಗೆ ಕುಳಿತಿರುವ ಅಹ್ಮದ್ ಎಂಬ ಯುವಕನನ್ನು ಉಪಚರಿಸು. ನಾನೀಗಲೇ ಬಂದೆ'' ಎಂದು ಹೇಳಿ ಹೊರಟು ಹೊದರು.

ಯಹ್ಯಾ ಮರಳಿ ಬರುವಾಗ ಕೈಯಲ್ಲಿ ಒಂದು ಸುತ್ತೋಲೆಯಿತ್ತು. ಯಹ್ಯಾ ಮಗನೊಂದಿಗೆ ಕೇಳಿದರು: ''ಮಗನೇ, ನೀನು ಇಷ್ಟು ಹೊತ್ತು ಉಪಚರಿಸಿದ ವಿಶೇಷ ಅತಿಥಿ ಯಾರೆಂದು ಗೊತ್ತೇ?

''ಸನ್ಮಾನ್ಯರಾದ ಅಬೂಖಾಲಿದ್‌ರ ಪುತ್ರ.'' ಮಗ ಉತ್ತರಿಸಿದ.

''ನಂತರ.'' ಯಹ್ಯಾ ಮುಂದುವರಿಸಿದರು: ''ಈ ಯುವಕನೊಂದಿಗೆ ನಮಗೆ ಹೆಚ್ಚು ಹಕ್ಕು ಬಾಧ್ಯತೆ ಇದೆ. ನಮ್ಮ ಸಕಲ ಉನ್ನತಿಗೂ ಅಹ್ಮದನ ತಂದೆಯೇ ಕಾರಣರಾಗಿದ್ದಾರೆ. ಅವರು ಸಹಾಯ ಸಹಕಾರ ನೀಡದಿರುತ್ತಿದ್ದರೆ ನಾವಿಂದು ಈ ಸ್ಥಾನದಲ್ಲಿರುತ್ತಿರಲಿಲ್ಲ.'' ಯಹ್ಯಾನ ಮಗ ಅಹ್ಮದನನ್ನು ಆಲಿಂಗಿಸುತ್ತಾ ''ಅಪ್ಪಾ, ನಾನು ಮಾಡಿದ ಉಪಚಾರ ಸಾಕಾಗದೇ ಹೋಗಬಹುದೇ?''

''ನನಗೆ ಸಮಾಧಾನವಾಗಿದೆ.'' ಅಹ್ಮದ್ ಹೇಳಿದ.

''ಮಗನೇ, ಈ ಯುವಕನ ಬೇಡಿಕೆಗೆ ನಾನು ಹೇಗೆ ಪ್ರತಿಕ್ರಿಯಿಸುತ್ತಿದ್ದೇನೆಂದು ಗೊತ್ತೇ? ಅಹ್ಮದ್ ಅವರನ್ನೇ ನೋಡಿದ.'' ಯಹ್ಯಾ ಹೇಳಿದರು: ''ನಿನ್ನ ತಂದೆ ಮಾಡಿದ ಉಪಕಾರವನ್ನು ಹೇಗೆ ತೀರಿಸಬೇಕೆಂದು ಗೊತ್ತಾಗುವುದಿಲ್ಲ, ಆದರೆ ಮನಸಾ ಒಂದು ತೀರ್ಮಾನ ಮಾಡಿದ್ದೇನೆ. ಇದೋ, ಖಲೀಫಾರಿಂದ ಒಂದು ಅನುಮತಿಯನ್ನು ಪಡೆದು ಬಂದಿರುತ್ತೇನೆ.''

''ಏನದು ತೀರ್ಮಾನ?'' ಮಗನ ಪ್ರಶ್ನೆ.

''ನಾನು ಈ ಯುವಕನಿಗೆ ನನ್ನ ಸ್ಥಾನವನ್ನು ತೆರವುಗೊಳಿಸುತ್ತಿದ್ದೇನೆ. ಇಂದಿನಿಂದ ಇಲ್ಲಿನ ಗವರ್ನರ್ ಅಹ್ಮದ್ ಆಗಿದ್ದಾನೆ.

ಆ ವೃತ್ತಾಂತವನ್ನು ಆಲಿಸಿದ ಜನರು ಅಷ್ಟು ಸುಲಭದಲ್ಲಿ ನಂಬಲಿಲ್ಲ, ಆದರೆ ವಿಷಯವು ವಾಸ್ತವಿಕವಾಗಿತ್ತು. ಅಹ್ಮದ್ ಮರುದಿನದಿಂದಲೇ ಗವರ್ನರ್ ಪದವಿಯನ್ನು ಅಲಂಕರಿಸಿದನು.

---

● ಖಲೀಫ ಮಹ್ದಿ(775-785) ಅಬ್ಬಾಸಿ ರಾಜ್ಯದ ಆಡಳಿತಾಧಿಕಾರಿಯಾಗಿದ್ದರು. ಶತ್ರುಗಳೊಂದಿಗೂ ಕರುಣೆ ತೋರಿದ ಮಹ್ದಿಯ ಆಡಳಿತಾವಧಿಯಲ್ಲಿ ಪ್ರಬುದ್ಧರಾದ ಅಧಿಕಾರಿಗಳು ದೇಶಕ್ಕೆ ಹೆಸರು ಗೌರವವನ್ನು ಗಳಿಸಿ ಕೊಟ್ಟಿದ್ದರು.

## 5. ಆಡಳಿತಗಾರ ಮತ್ತು ತಂದೆ

ಹಕಮ್ ಮತ್ತು ಅಬ್ದುಲ್ಲಾ ಸ್ಪೆಯಿನ್‌ನಲ್ಲಿ ಆಡಳಿತ ನಡೆಸುತ್ತಿದ್ದ ಅಬ್ದುರ್ರಹ್ಮಾನನ ಇಬ್ಬರು ಗಂಡು ಮಕ್ಕಳಾಗಿದ್ದರು. ಅಬ್ದುರ್ರಹ್ಮಾನನ ನಂತರ ಅವರ ದೊಡ್ಡ ಮಗ ಹಕಮ್ ಆಡಳಿತಗಾರನಾಗುವನೆಂಬುದು ಎಲ್ಲರ ಭಾವನೆಯಾಗಿತ್ತು. ಅಬ್ದುಲ್ಲಾನಿಗಾದರೋ ಸಾಮ್ರಾಜ್ಯದ ಆಡಳಿತಗಾರನಾಗಬೇಕೆಂಬ ಆಸೆ ಇತ್ತು. ಆದರೆ ಆಸೆ ಪಟ್ಟು ಏನು ಪ್ರಯೋಜನ? ಅಣ್ಣ ಜೀವಂತವಿರುವ ತನಕ ಅದು ಅಸಾಧ್ಯವಾದ



ಮಾತೆಂಬುದು ಅಬ್ದುಲ್ಲಾನಿಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದ ಅಧಿಕಾರಕ್ಕಾಗಿ ಯಾವುದಾದರೂ ವಕ್ರಮಾರ್ಗವನ್ನು ಹಿಡಿಯಬೇಕೆಂಬುದು ಆತನ ಮುಂದಿನ ಗುರಿಯಾಗಿತ್ತು. ಅಬ್ದುಲ್ಲಾನ ಅಧಿಕಾರ ವ್ಯಾಮೋಹದ ಬಗ್ಗೆ ತಿಳಿದ ಒಬ್ಬ ಅಧಿಕಾರಿ ಅರಮನೆಯಲ್ಲಿದ್ದನು. ಅವನು ಭಡ್ತಿ ಸಿಗದೆ ನಿರಾಶನಾಗಿದ್ದನು. ಅಬ್ದುಲ್ಲಾನನ್ನು ತನ್ನ ಬಲೆಗೆ ಹಾಕಿ ಹೇಗಾದರೂ ಮಾಡಿ ಅವನನ್ನು ಅಧಿಕಾರಕ್ಕೇರಿಸಲು ಗೂಢಾಲೋಚನೆ ನಡೆಸ ತೊಡಗಿದ. ಏಕೆಂದರೆ ಅಬ್ದುಲ್ಲಾ ಅಧಿಕಾರ ವಹಿಸಿದರೆ ತನ್ನ ಆಕಾಂಕ್ಷೆಗಳು ಸುಲಭದಲ್ಲಿ ಪೂರ್ಣಗೊಳ್ಳಬಹುದೆಂಬುದು ಅವನಿಗೆ ಖಚಿತವಿತ್ತು.

ಅಧಿಕಾರಿಯ ಪ್ರಯತ್ನ ವಿಫಲವಾಗಲಿಲ್ಲ. ಮೊದಲು ಅಬ್ದುಲ್ಲಾನನ್ನು ತನ್ನ ಬಲೆಗೆ ಹಾಕಿಕೊಂಡನು. ತರುವಾಯ ಅವರಿಬ್ಬರೂ ಜೊತೆಯಾಗಿ ಪ್ರತಿದಿನವೂ ಗುಪ್ತವಾಗಿ ಒಂದು ಕಡೆ ಸೇರುತ್ತಿದ್ದರು. ಅಧಿಕಾರಿಯು ಹಕಮ್‌ನ ಪ್ರತಿಯೊಂದು ಚಲನವಲನಗಳನ್ನು ಅಬ್ದುಲ್ಲಾನಿಗೆ ತಿಳಿಸುತ್ತಿದ್ದನು. ಹಕಮ್ ಒಬ್ಬ ಸಮರ್ಥ ಆಡಳಿತಗಾರನಾಗಲು ಅರ್ಹನಲ್ಲವಾದ್ದರಿಂದ ಸ್ಪೈನಿನ ರಾಜ್ಯಭಾರ ನಡೆಸಲು ಅಬ್ದುಲ್ಲಾ ಹೆಚ್ಚು ಅರ್ಹನಾಗಿದ್ದಾನೆಂದು ಅವನು ಅಬ್ದುಲ್ಲಾನಿಗೆ ಮನವರಿಕೆ ಮಾಡಿಸಿದನು. ಅದೇ ರೀತಿ ಪ್ರಜೆಗಳಿಗೂ ಅಬ್ದುಲ್ಲಾನೇ ಆಡಳಿತಗಾರ ನಾಗಬೇಕೆಂಬ ಆಸೆ, ಆದರೆ ಅವರು ಭಯದಿಂದ ನೇರವಾಗಿ ಹೇಳಲು ಹಿಂಜರಿಯುತ್ತಿದ್ದಾರೆ ಎಂದು ಸುಳ್ಳು ಹೇಳಿದನು. ಇದನ್ನೆಲ್ಲಾ ಆಲಿಸಿದ ಅಬ್ದುಲ್ಲಾ ಸಿಂಹಾಸನದ ಕನಸು ಕಾಣತೊಡಗಿದ. ಅಧಿಕಾರ ಮೋಹದಿಂದ ಅಬ್ದುಲ್ಲಾನ ಕಣ್ಣು ಕುರುಡಾಯಿತು. ಮುಂದೇನೂ ಆಲೋಚಿಸಲಿಲ್ಲ.

ಕೊನೆಗೂ ಅಧಿಕಾರಿಯ ಸಹಾಯದಿಂದ ಸರಕಾರವನ್ನು ಬುಡ ಮೇಲುಗೊಳಿಸಲು ತಂತ್ರ ಪ್ರಯೋಗಿಸಿದನು. ಅದಕ್ಕಾಗಿ ಸೇನೆಯಲ್ಲಿದ್ದ ಕೆಲವು ಅಸಂತುಷ್ಟರಾದ ಸೈನಿಕರನ್ನು ತಮ್ಮ ಕೆಲಸಕ್ಕೆ ಬಳಸಿಕೊಂಡನು. ಅವರಿಗೆ ಅಬ್ದುಲ್ಲಾ ಅಧಿಕಾರ ಕೈಗೆ ಬಂದರೆ ಉನ್ನತ ಪದವಿಗಳನ್ನು ನೀಡಲಾಗುವುದೆಂದು ಆಮಿಷ ನೀಡಲಾಗಿತ್ತು.

ಒಂದು ದಿನ ಗಲಭೆಯೆಬ್ಬಿಸಿ ತಂದೆ ಮತ್ತು ಅಣ್ಣನನ್ನು ಅತ್ಯಂತ ನಿಗೂಢವಾಗಿ ಕೊಲ್ಲುವ ತಂತ್ರ ಪ್ರಯೋಗಿಸಿದನು. ಅದಕ್ಕೆ ಸೂಕ್ತವಾದ ಒಂದು ರಾತ್ರಿಯನ್ನು ನಿಗದಿಪಡಿಸಲಾಯಿತು. ಆದರೆ ಅಬ್ದುರ್ರಹ್ಮಾನರಿಗೆ ಗಲಭೆಯ ಬಗ್ಗೆ ಹೇಗೋ ಸುಳಿವು ಸಿಕ್ಕಿತು. ಗುಪ್ತಚರರು ಅದು ಸತ್ಯವೆಂದು ಸಾಬೀತು ಪಡಿಸಿದರು. ನಂತರ ತಡವಾಗಲಿಲ್ಲ. ಅಬ್ದುಲ್ಲಾ ಮತ್ತು ಅವನ ಸಹಚರರನ್ನು ಸೆರೆಮನೆಗೆ ತಳ್ಳಲಾಯಿತು. ವಿಚಾರಣೆಗೆ ಹೆದರಿ ಗೂಢಾಲೋಚನೆಗೆ ನಾಯಕತ್ವವಹಿಸಿದ್ದ ಅಧಿಕಾರಿಯು ಆತ್ಮಹತ್ಯೆ

ಮಾಡಿಕೊಂಡನು. ವಿಚಾರಣೆ ನಡೆಸಿ, ಅಬ್ದುಲ್ಲಾ ಮತ್ತು ಸಹಚರರನ್ನು ಗಲ್ಲು ಶಿಕ್ಷೆಗೆ ಗುರಿಪಡಿಸಲಾಗುವುದೆಂದು ಘೋಷಿಸಲಾಯಿತು.

ಇತ್ತ ಹಕಮ್‌ನಿಗೆ ತನ್ನ ತಮ್ಮನೊಂದಿಗೆ ಅತಿಯಾದ ಪ್ರೀತಿಯಿತ್ತು. ಅಬ್ದುಲ್ಲಾನ ಅಧಿಕಾರ ಮೋಹದ ಬಗ್ಗೆ ಆಲೋಚಿಸಿ ದುಃಖಿತನಾದನು. ಅಧಿಕಾರಿಗಳು ಒಟ್ಟು ಸೇರಿ ದುಷ್ಪ್ರೇರಣೆ ನೀಡಿದ್ದರಿಂದ ಅಬ್ದುಲ್ಲಾ ಇಂತಹ ಕುಕೃತ್ಯಕ್ಕೆ ಬಲಿಯಾಗಿರಬಹುದೆಂದು ಅವನು ಭಾವಿಸಿದನು. ಹಕಮ್‌ನಿಗೆ ತಮ್ಮನ ಮರಣವನ್ನು ಸಹಿಸಲು ಅಸಾಧ್ಯವಾಗಿತ್ತು. ಹಕಮ್ ತಂದೆಯೊಡನೆ ತಮ್ಮನ ಶಿಕ್ಷೆಯಲ್ಲಿ ರಿಯಾಯಿತಿ ತೋರಬೇಕೆಂದು ಬಿನ್ನವಿಸಿಕೊಂಡನು. ಆದರೆ ಅಬ್ದುರ್ರಹ್ಮಾನ್ ಅದಕ್ಕೆ ಸಿದ್ಧರಿರಲಿಲ್ಲ. ಹಕಮ್ ಪುನಃ ತಂದೆಯನ್ನುದ್ದೇಶಿಸಿ ''ಅಪ್ಪಾ, ಅವನ ಅವಿವೇಕದಿಂದ ಮಾಡಿದ ಈ ಕೃತ್ಯವನ್ನು ನಿಮ್ಮ ಹೊರತು ಇನ್ನಾರು ತಾನೆ ಕ್ಷಮಿಸಬಲ್ಲರು?'' ಎಂದು ಕೇಳಿದ.

''ಹಕಮ್, ಅಬ್ದುಲ್ಲಾ ಗಲ್ಲು ಶಿಕ್ಷೆಗೆ ಅರ್ಹನಾಗಿದ್ದಾನೆ'' ಅಬ್ದುರ್ರಹ್ಮಾನ್ ಸಮರ್ಥಿಸಿ ಕೊಂಡರು.

''ಅಪ್ಪಾ, ಜೀವಾವಧಿ ಶಿಕ್ಷೆ ನೀಡಿದರೆ ಸಾಕಾಗಲಾರದೇ?'' ಮುಂದೆ ತಾನು ಮಾಡಿದ ತಪ್ಪಿನ ಅರಿವಾಗಿ ಪಶ್ಚಾತ್ತಾಪ ಪಡುವ ಸಾಧ್ಯತೆ ಇರಲಾರದೇ?'' ಹಕಮ್ ತನ್ನ ಸಂಕಟವನ್ನು ಈ ರೀತಿ ವ್ಯಕ್ತಪಡಿಸಿದನು. ಅಬ್ದುರ್ರಹ್ಮಾನ್, ''ಹಕಮ್, ನನ್ನ ಪ್ರಿಯ ಮಗನೇ, ನಿನ್ನ ಸಹೋದರ ಪ್ರೇಮ ನನಗೆ ಚೆನ್ನಾಗಿ ಗೊತ್ತು. ನಿನ್ನ ಕಾಳಜಿಯ ಬಗ್ಗೆ ನೋಡಿ ಹೆಮ್ಮೆಯಾಗುತ್ತಿದೆ. ಆದರೆ.... ಅಬ್ದುಲ್ಲಾ ಮಾಡಿದ ತಪ್ಪನ್ನು ಕ್ಷಮಿಸಲು ಅಥವಾ ಅದರಲ್ಲಿ ಕಡಿತಗೊಳಿಸಲು ಅದು ಸಣ್ಣ ತಪ್ಪೇನಲ್ಲ?''

''ಅಪ್ಪಾ, ಶಿಕ್ಷೆಯನ್ನು ಸ್ವಲ್ಪ ಕಡಿತಗೊಳಿಸಬೇಕೆಂಬುದು ನನ್ನ ಬೇಡಿಕೆ.'' ಹಕಮ್ ಅಂಗಲಾಚಿದ.

''ಮಗನೇ, ಈ ವಿಷಯದಲ್ಲಿ ಅಬ್ದುಲ್ಲಾ ಎಲ್ಲ ಪ್ರಜೆಗಳಂತೆಯೇ. ಕಾನೂನಿನ ಮುಂದೆ ಎಲ್ಲರೂ ಸಮಾನರು. ದೇಶ ದ್ರೋಹಕ್ಕೆ ಗಲ್ಲು ಶಿಕ್ಷೆಯ ಹೊರತು ಬೇರೆ ಯಾವ ಶಿಕ್ಷೆಯೂ ಇಲ್ಲ.''

''ಆದರೆ, ನೀವು ಎಷ್ಟೋ ಮಂದಿಯನ್ನು ಕ್ಷಮಿಸಿ, ಅವರ ಶಿಕ್ಷೆಯಲ್ಲಿ ರಿಯಾಯಿತಿ ತೋರಿರುವಿರಲ್ಲವೇ? ಪಶ್ಚಾತ್ತಾಪ ಪಟ್ಟವರ ಮನಸ್ಸು ನೋಡಿ ತೀರ್ಮಾನವನ್ನು ಹಿಂಪಡೆಯಲಿಲ್ಲವೇ?'' ಹಕಮ್ ಹಪಹಪಿಸಿದನು.

''ಹೌದು.'' ಅಬ್ದುರ್ರಹ್ಮಾನ್ ಉತ್ತರಿಸಿದರು.

''ಅಪ್ಪಾ ಗಲ್ಲು ಶಿಕ್ಷೆಯಲ್ಲಿ ರಿಯಾಯಿತಿ ತೋರಿದರೆ ನಿಮ್ಮ ಸರ್ವಾಧಿಕಾರವನ್ನು ಯಾರೂ ಪ್ರಶ್ನಿಸಲಾರರು.''

''ಅದು ಸರಿಯಾಗಿರಬಹುದು. ಆದರೆ.... ಎರಡು ಕಾರ್ಯಗಳಿಗಾಗಿ ಅಬ್ದುಲ್ಲಾನ ಶಿಕ್ಷೆಯನ್ನು ಕಡಿತಗೊಳಿಸಲಾಗದು. ಮೊದಲನೆಯದಾಗಿ ಅವನು ಅಧಿಕಾರದಾಹಿಯಾಗಿದ್ದಾನೆ. ಒಂದು ವೇಳೆ ಅವನು ಜೀವಿಸಿದ್ದರೆ ಎಷ್ಟೋ ಮಂದಿಯ ಸಾವಿಗೆ ಕಾರಣನಾಗಬಹುದು. ಒಬ್ಬನ ರಕ್ತದಿಂದ ಅದೆಷ್ಟೋ ಮಂದಿಯ ಜೀವ ರಕ್ಷಿಸಲು ಸಾಧ್ಯವಾಗುವುದಾದರೆ ಅದರಲ್ಲಿ ಯಾವುದು ಉತ್ತಮ?'' ಎಂದು ಹೇಳಿ ಅಬ್ದುರ್ರಹ್ಮಾನ್ ಸುಮ್ಮನಾದರು. ಸ್ವಲ್ಪ ಸಮಯದ ನಂತರ ಮೌನ ಮುರಿದು ತನ್ನ ಮಾತನ್ನು ಮುಂದುವರಿಸಿದರು: ''ಹಕಮ್, ನಿನ್ನ ತಮ್ಮ ನನ್ನ ಮಗನೇ. ಅವನ ಸಾವಿನಿಂದ ನಿನಗಿಂತಲೂ ಹೆಚ್ಚು ನಾನು ದುಃಖಿತನಾಗುವೆನು. ಆದರೆ... ಅವನು ದೇಶದ್ರೋಹಿಯಾಗಿ ಬಿಟ್ಟನು.... ತಂದೆ ಮಗನೆಂಬ ನೆಲೆಯಲ್ಲಿ ಶಿಕ್ಷೆಯನ್ನು ಕಡಿತಗೊಳಿಸಿದರೆ ಅದು ಸಾಮ್ರಾಜ್ಯಕ್ಕೆ ಕಳಂಕ ಪ್ರಾಯವಾಗಿದೆ. ಹಕಮ್.... ನಾನು ತೆಗೆದ ತೀರ್ಮಾನವನ್ನು ಇನ್ನು ಬದಲಾಯಿಸುವುದು ಅಸಾಧ್ಯವಾದ ಮಾತು.

ಅಬ್ದುಲ್ಲಾ ಗಲ್ಲು ಶಿಕ್ಷೆಗೆ ಗುರಿಯಾದನು. ಆಡಳಿತಗಾರನೆಂಬ ನೆಲೆಯಲ್ಲಿ ಅಬ್ದುರ್ರಹ್ಮಾನ್ ಹೆಮ್ಮೆ ಪಟ್ಟರು. ಆದರೆ.... ತಂದೆಯೆಂಬ ನೆಲೆಯಲ್ಲಿ ಅಬ್ದುರ್ರಹ್ಮಾನನ ಮುಂದಿನ ದಿನಗಳು ದುಃಖ ಸಾಗರದಲ್ಲಿ ಮುಳುಗಿದ್ದವು.

---

• ಸ್ಪೈಯಿನ್ ಆಡಳಿತ ನಡೆಸಿದ್ದ ಆಡಳಿತಗಾರ ಮೂರನೆಯ ಅಬ್ದುರ್ರಹ್ಮಾನ್ ಆಗಿದ್ದರು(912-961). ಅವರ ಆಡಳಿತ ಕಾಲ ಸ್ಪೈಯಿನ್‌ನ ಸುವರ್ಣ ಯುಗವಾಗಿತ್ತು.

# 6. ದೇವ ಮತ್ತು ಮಾತೆ

ಬಾಯಝೀದ್ ಓರ್ವ ವಿಧವೆಯ ಏಕೈಕ ಮಗನಾಗಿದ್ದರು. ಅವರು ತನ್ನ ಜೀವನದ ಎಲ್ಲ ಕನಸುಗಳೂ ಬಾಯಝೀದ್‌ರಲ್ಲಿ ನಿರೀಕ್ಷಿಸಿದ್ದರು. ಮಗ ಆ ತಾಯಿಯ ಕಣ್ಣಿನ ತಂಪು ಮತ್ತು ಪ್ರಕಾಶವಾಗಿದ್ದರು.

ಬಾಯಝೀದ್ ಸಮರ್ಥರೂ ಬುದ್ಧಿವಂತರೂ ಆದ ಯುವಕರಾಗಿದ್ದರು. ಚಿಕ್ಕಂದಿನಲ್ಲಿಯೇ ಜ್ಞಾನ ಸಂಪಾದನೆಗೆ ಹೆಚ್ಚಿನ ಆಸಕ್ತಿ ತೋರುತ್ತಿದ್ದರು. ಕಲಿತದ್ದನ್ನು ನೆನಪಿನಲ್ಲಿಡಲು ಮತ್ತು ಅದನ್ನು ಜೀವನದಲ್ಲಿ ಅಳವಡಿಸಲು ಪ್ರಯತ್ನಿಸಿದರು. ಬಾಯಝೀದ್ ಮದ್ರಸದಲ್ಲಿ ಕಲಿಯುತ್ತಿರುವಾಗ ಒಂದು ಘಟನೆ ನಡೆಯಿತು. ಮಾತಾಪಿತರೊಂದಿಗೂ ದೇವನೊಂದಿಗೂ ಕೃತಜ್ಞತೆ ತೋರಿರಿ ಎಂಬ ದೇವವಾಕ್ಯವು ಅವರ ಮನಸ್ಸಿಗೆ ನಾಟಿತು. ಒಂದೇ ಸಮಯದಲ್ಲಿ ಇದು ಹೇಗೆ ಸಾಧ್ಯ? ಎಂಬುದನ್ನು ಚಿಂತಿಸತೊಡಗಿದರು. ಹೃದಯದಲ್ಲಿ ಭಾರೀ ಕೋಲಾಹಲ ಎದ್ದಿತು.



ಮಗನ ಮುಖಭಾವದಲ್ಲಿನ ಪರಿವರ್ತನೆಯನ್ನು ಕಂಡು ತಾಯಿ ''ಏನಾಯಿತು ಮಗನೇ?'' ಎಂದು ಕೇಳಿದರು. ಬಾಯರ್ಝೀದ್ ಉತ್ತರಿಸಲಿಲ್ಲ. ತಾಯಿಯು ಒತ್ತಾಯ ಪಡಿಸಿದಾಗ ಅವರು ತನ್ನ ಮನಸ್ಸಿನಲ್ಲಿ ಉಂಟಾದ ತಳಮಳವನ್ನು ತಿಳಿಸಿದರು: ''ಅಮ್ಮಾ, ಸೀಮಿತ ಶಕ್ತಿ ಸಾಮರ್ಥ್ಯ ಇರುವ ನನಗೆ ಒಂದೇ ಸಮಯದಲ್ಲಿ ಇಬ್ಬರು ಯಜಮಾನರನ್ನು ಒಂದೇ ರೀತಿಯಲ್ಲಿ ಪ್ರೀತಿಸಲು, ಸೇವೆ ಮಾಡಲು ಹೇಗೆ ತಾನೆ ಸಾಧ್ಯ? ಒಂದೋ ದೇವನು ಇಲ್ಲವೇ ತಾಯಿ. ಒಂದನ್ನು ಇನ್ನೊಂದಕ್ಕಾಗಿ ತೊರೆಯಲು ನನ್ನಿಂದ ಸಾಧ್ಯವಿಲ್ಲ. ಬಾಯರ್ಝೀದರ ಮಾತುಗಳನ್ನು ಆಲಿಸಿದ ತಾಯಿಯ ಕಣ್ಣುಗಳಿಂದ ಕಣ್ಣೀರು ಧಾರಾಕಾರವಾಗಿ ಇಳಿಯಿತು. ಮಗನನ್ನು ಎದೆಗಪ್ಪಿಕೊಂಡು ಹೇಳಿದರು: ''ನನ್ನ ಪ್ರಿಯ ಪುತ್ರಾ, ನಾನಿದೋ ನಿನ್ನನ್ನು ದೇವನ ಸೇವೆಗಾಗಿ ಅರ್ಪಿಸುತ್ತಿದ್ದೇನೆ. ದೇವನಿಗಾಗಿ ನೀನು ಏನು ಮಾಡಿದರೂ ಅದು ನಿನ್ನ ತಾಯಿಗಲ್ಲದೆ ಬೇರಾರಿಗೂ ಅಲ್ಲ ಎಂಬುದನ್ನು ಧೈರ್ಯದಿಂದ ನಂಬು.'' ಬಾಯರ್ಝೀದ್ ಸಂಶಯದಿಂದ ತಾಯಿಯ ಮುಖವನ್ನೇ ನೋಡಿದರು. ಇದನ್ನು ಅರ್ಥಮಾಡಿದ ತಾಯಿ ಅದೇ ಮಾತನ್ನು ಪುನರಾವರ್ತಿಸಿದರು. ಬಾಯರ್ಝೀದ್‌ಗೆ ಈಗ ಸಮಾಧಾನವಾಯಿತು. ಸಂತೋಷದಿಂದ ಪುಳಕಿತರಾದರು. ಅತ್ಯಂತ ಭಾರದ ಒಂದು ವಸ್ತುವನ್ನು ಮನದಿಂದ ಕೆಳಗಿಸಲು ಬೇಕಾದ ಪರಿಹಾರ ಲಭಿಸಿದ ಸಂತೋಷ ಅವರ ಮನದಲ್ಲಿ ಎದ್ದು ಕಾಣುತ್ತಿತ್ತು. ಹಾಗೆಯೇ ಬಾಯರ್ಝೀದ್ ತನ್ನ ಗುರಿ ಸಾಧಿಸಿದರು. ಪವಿತ್ರ ಗ್ರಂಥಗಳ ಅಧ್ಯಯನ ಮತ್ತು ಜ್ಞಾನ ರಂಗಗಳಲ್ಲಿ ನೈಪುಣ್ಯತೆಯನ್ನು ಗಳಿಸಿದರು. ಉನ್ನತ ವ್ಯಾಸಂಗಕ್ಕಾಗಿ ಬೇರೆ ಬೇರೆ ದೇಶಗಳಿಗೆ ಹೋದರು. ಬಾಯರ್ಝೀದ್‌ರ ಅನಂತರದ ದಿನಗಳು ದೇಶವಿದೇಶಗಳ ಪರ್ಯಟನೆಯಾಗಿತ್ತು. ಹಲವು ಉನ್ನತ ವಿದ್ವಾಂಸರುಗಳಿಂದ ಜ್ಞಾನ ಸಂಪಾದಿಸಿ ವಿದ್ವಾಂಸರಾದರು. ಸರ್ವರಿಂದಲೂ ಗೌರವಿಸಲ್ಪಟ್ಟರು.

ಬಾಯರ್ಝೀದ್ ತನ್ನ ನಂತರದ ಜೀವನವನ್ನು ಆಧ್ಯಾತ್ಮಿಕ ಸಂದೇಶಗಳನ್ನು ಜನರಿಗೆ ತಲುಪಿಸಲಿಕ್ಕಾಗಿ ಮೀಸಲಾಗಿಟ್ಟರು. ಅವರ ಅಸಾಮಾನ್ಯ ದೃಷ್ಟಿಕೋನ, ಅಸಾಧಾರಣ ಆಧ್ಯಾತ್ಮಿಕ ಶಕ್ತಿ ಮತ್ತು ಚಾರಿತ್ರ್ಯ ಶುದ್ಧಿ ಅನೇಕರನ್ನು ಅವರ ಕಡೆಗೆ ಆಕರ್ಷಿಸಿತು. ಇದರಿಂದ ಅವರ ಗೌರವವು ಇನ್ನಷ್ಟು ಹೆಚ್ಚಾಯಿತು. ಹಲವು ದೇಶಗಳಿಂದ ಜನರು ಬಂದು ಅವರ ಶಿಷ್ಯತ್ವವನ್ನು ಸ್ವೀಕರಿಸಿದರು. ಮೂವತ್ತು ವರ್ಷಗಳ ತನಕ ಬಾಯರ್ಝೀದ್ ಈ ಕಾರ್ಯಗಳನ್ನು ಮುಂದುವರಿಸಿದ್ದರು.

ಒಂದು ದಿನ ಅವರು ತನ್ನ ಗುರುವಿನ ಬಳಿಗೆ ಹೋಗಿ ''ಗುರುವರ್ಯರೇ, ನಾನು ಇದುವರೆಗೆ ದೇವನ ಸೇವೆಗಾಗಿ ನನ್ನನ್ನು ಮುಡಿಪಾಗಿಟ್ಟಿದ್ದೇನೆ. ಇದೀಗ ನನಗೆ ನನ್ನ ತಾಯಿಯ ನೆನಪಾಗುತ್ತಿದೆ'' ಎಂದು ತಿಳಿಸಿದರು. ಬಾಯರ್ಝೀದನನ್ನು ಚೆನ್ನಾಗಿ

ಅರ್ಥಮಾಡಿಕೊಂಡಿದ್ದ ಗುರು ಹೇಳಿದರು: ''ಒಳ್ಳೆಯದಾಯಿತು. ಇನ್ನು ಹೋಗಿ ನಿನ್ನ ತಾಯಿಯನ್ನು ನೋಡಿಕೋ.''

ಬಾಯಝೀದ್ ಊರಿಗೆ ಹೊರಟರು. ದೀರ್ಘ ಪ್ರಯಾಣ ಮುಗಿಸಿ ತನ್ನ ಹಳೆಯ ಮನೆಗೆ ಬಂದು ತಲುಪುವಾಗ ಅರ್ಧ ರಾತ್ರಿಯಾಗಿತ್ತು. ಬಾಯಝೀದರ ಹೃದಯ ಕಂಪಿಸತೊಡಗಿತು. ಏಕೆಂದರೆ ಅರ್ಧ ರಾತ್ರಿಯಾದರೂ ಮನೆಯ ಬೆಳಕನ್ನು ನಂದಿಸಿರಲಿಲ್ಲ. ಅವರು ಬಾಗಿಲು ತಟ್ಟಲು ಹೋದಾಗ ಮನೆಯೊಳಗಿನಿಂದ ತಾಯಿಯ ಪ್ರಾರ್ಥನೆ ಕೇಳಿ ಬಂತು: ''ಕರುಣಾಳುವಾದ ದೇವನೇ, ನಿನ್ನ ಮಾರ್ಗದಲ್ಲಿ ನನ್ನ ಮಗನನ್ನು ಅರ್ಪಿಸಿದ್ದೇನೆ. ನೀನು ಅವನಿಗೆ ಎಂದೆಂದಿಗೂ ಆಸರೆಯಾಗಿರು.'' ಬಾಯಝೀದರಿಗೆ ತನ್ನನ್ನು ನಿಯಂತ್ರಿಸಲಾಗಲಿಲ್ಲ. ಬಿಕ್ಕಿಬಿಕ್ಕಿ ಅಳತೊಡಗಿದರು. ಈಗಲೂ ನನ್ನ ತಾಯಿ ತನಗಾಗಿ ಪ್ರಾರ್ಥಿಸುವುದನ್ನು ಕೇಳಿ ಅವರ ಮನಸ್ಸು ಕರಗಿತು. ತಾಯಿ ಆ ಅಳುವನ್ನು ಕೇಳಿದರು. ಅವರು ತನ್ನ ಮಗನ ಆಗಮನವನ್ನು ತಕ್ಷಣ ಅರಿತರು. ''ಮಗನೇ.... ನೀ ಬಂದಿರುವೆಯಾ. ಬಾಗಿಲು ತೆರೆಯಲ್ಪಟ್ಟಿತು. ಬಾಯಝೀದ್ ಮನೆಯೊಳಗೆ ಪ್ರವೇಶಿಸಿ ತಾಯಿಯನ್ನು ಅಪ್ಪಿ ಹಿಡಿದರು. ತಾಯಿಯು ತನ್ನ ಮಗನ ತಲೆಯಿಂದ ಕಾಲಿನ ವರೆಗೆ ಪ್ರೀತಿಯಿಂದ ನೇವರಿಸುತ್ತಾ ಹೇಳಿದರು: ''ಪ್ರಿಯ ಮಗನೇ, ತುಂಬಾ ದಿನಗಳಾಯಿತು. ನಿನ್ನೆ ಬೆಳಿಗ್ಗೆ ನನ್ನ ಮಗನನ್ನು ನೋಡಬೇಕೆಂದು ಆಶಿಸಿದ್ದೆ. ನೀನು ಹೋದನಂತರ ನಿನ್ನೆ ರಾತ್ರಿ ಮೊದಲ ಬಾರಿ ನೀನು ಬರಬೇಕೆಂದು ದೇವನಲ್ಲಿ ಪ್ರಾರ್ಥಿಸಿದ್ದೆ. ಸೂಕ್ತ ಸಮಯದಲ್ಲಿ ನೀನು ತಲುಪಿದ್ದೀಯಾ..... ದೇವನಿಗೆ ಸರ್ವಸ್ತುತಿ ಸ್ತೋತ್ರಗಳು....''

ಬಾಯಝೀದ್ ತಾಯಿಯ ಭುಜದ ಮೇಲೆ ತಲೆ ಚಾಚಿದರು. ತಾಯಿ ಹೇಳಿದರು: ''ಮಗನೇ, ಅಂತರ್ ದೃಷ್ಟಿಯಿಂದ ನಾನು ನಿನ್ನನ್ನು ನೋಡುತ್ತಿದ್ದೇನೆ. ನನ್ನ ದೃಷ್ಟಿ ನಷ್ಟ ಹೊಂದಿದ್ದರೂ ನನಗೆ ನನ್ನ ಮಗನನ್ನು ನೋಡಲು ಸಾಧ್ಯವಾಗುತ್ತದೆ. ದೇವನೇ ನಿನಗೇ ಸರ್ವಸ್ತುತಿ.''

ಆಗ ತಾನೆ ತನ್ನ ತಾಯಿ ಅಂಧಳಾಗಿರುವರೆಂಬುದನ್ನು ಬಾಯಝೀದ್ ತಿಳಿದು ಕೊಂಡರು. ಇದನ್ನು ತಿಳಿದ ಅವರು ಪುನಃ ಬಿಕ್ಕಿ ಬಿಕ್ಕಿ ಅಳತೊಡಗಿದರು.

''ತಾಯಿಯ ಸೇವೆಯೇ ಅಲ್ಲಾಹನ ಸೇವೆಯಾಗಿದೆ'' ಎಂದು ಹೇಳಿ ತಾಯಿಯ ಸೇವೆ ಮಾಡಲು ತೀರ್ಮಾನಿಸಿದರು. ಅನಂತರ ಬಾಯಝೀದ್ ತನ್ನ ತಾಯಿಯ ಕೊನೆಯುಸಿರಿನ ವರೆಗೂ ಬೇರೆಲ್ಲಿಗೂ ಹೋಗಲಿಲ್ಲ.

---

• ಬಾಯಝೀದ್ ಕುಮಿಸ್ ಪ್ರಾಂತ್ಯದ ಬಿಸ್ತಾಮಿನಲ್ಲಿ 13ನೇ ಶತಮಾನದಲ್ಲಿ ಜೀವಿಸಿದ್ದ ಸೂಫಿ ಸಂತರಾಗಿದ್ದರು.

## 7. ಅಭಯ ನೀಡಿದರೆ

ರಸ್ತೆಯಲ್ಲಿ ಅತ್ಯಂತ ವೇಗವಾಗಿ ನಡೆಯುತ್ತಿದ್ದ ಒಬ್ಬ ಯುವಕನ ಕೈ ಇನ್ನೊಬ್ಬನ ಮೈಮೇಲೆ ತಾಗಿತು. ಇದರಿಂದ ಆ ವ್ಯಕ್ತಿಯ ಕೈಯಲ್ಲಿದ್ದ ಬೆಲೆಬಾಳುವ ಒಂದು ಪಾತ್ರೆ ಕೆಳಗೆ ಬಿದ್ದು ಪುಡಿ ಪುಡಿಯಾಯಿತು. ಅದನ್ನು ಅವರಿಗೆ ಸಹಿಸಲಾಗಲಿಲ್ಲ. ಅವರು ಯುವಕನ ಮೇಲೆ ರೇಗಿದರು. ಆದರೆ ಯುವಕ ಅದು ಬೇಕು ಬೇಕೆಂದೇ ಮಾಡಿದ ಅಪರಾಧವಾಗಿರಲಿಲ್ಲ. ಯುವಕನು ಅವರೊಂದಿಗೆ ಕ್ಷಮೆ ಕೇಳಿದ. ಆದರೆ ಪಾತ್ರೆ ಕಳಕೊಂಡವರು ಕೋಪ ಮತ್ತು ಬೇಸರದಿಂದ ಆತ್ಮ ನಿಯಂತ್ರಣ ಕಳೆದುಕೊಂಡಿದ್ದರು. ಅವರು ಯುವಕನನ್ನು ದೂಡಿ ಎದೆಯ ಮೇಲೆ ಕುಳಿತರು. ಯುವಕನೂ ಅವರನ್ನು ದೂಡಿದಾಗ ಅವರು ಇನ್ನಷ್ಟು ಕುಪಿತರಾದರು. ಪರಸ್ಪರ ಹೊೖಕೈ ನಡೆಯಿತು. ಇಬ್ಬರೂ ಕೆಳಗೆ ಬಿದ್ದರು.

ತಲೆಗೆ ಕಲ್ಲು ತಾಗಿದ್ದರಿಂದ ಯುವಕನು ರಸ್ತೆಯಲ್ಲಿ ಬಿದ್ದು ಬಿಟ್ಟನು. ಜನರು ಓಡೋಡಿ ಬಂದಾಗ ಆ ವ್ಯಕ್ತಿ ಓಡಿಹೋದರು. ಅವರು ಓಡಿ ಒಂದು ಮನೆಯ ಮುಂದೆ ತಲಪಿದರು. ಬೇರೆ ದಾರಿಗಾಣದೆ ಮನೆಯ ಗೋಡೆ ಹಾರಿ ಒಳಗೆ ಹೊಕ್ಕರು. ಉದ್ಯಾನದ ಒಂದು ಮರದ ಮೂಲೆಯಲ್ಲಿ ಅಡಗಿ ಕುಳಿತರು. ಅವರನ್ನು ಹಿಂಬಾಲಿಸುತ್ತಾ ಬಂದವರು ಮಿಂಚಿನಂತೆ ಓಡಿ ಮರೆಯಾದ ವ್ಯಕ್ತಿಯನ್ನು ಕಾಣದೆ ಮರಳಿ ಹೋದರು.

ಪ್ರಭಾತದಲ್ಲಿ ವ್ಯಾಯಾಮ ಮಾಡಿ ತೋಟದಲ್ಲಿ ಸುತ್ತಾಡುತ್ತಿದ್ದ ಮನೆಯ ಯಜಮಾನ ಮರದ ಹಿಂಬದಿಯಲ್ಲಿ ಅಡಗಿ ಕುಳಿತಿದ್ದ ವ್ಯಕ್ತಿಯನ್ನು ಕಂಡು ಅವನ ಬಳಿಗೆ ಹೋದರು. ಹೃದಯ ಕಂಪಿಸುವಂತಹ ಭೀತಿಯಿಂದ ಅವರಿಗೆ ಅಲ್ಲಿಂದ ಓಡಿ ಹೋಗಲು ಸಾಧ್ಯವಾಗಲಿಲ್ಲ. ಅವರು ಮನೆ ಯಜಮಾನನ ಮುಂದೆ ಬಿಕ್ಕಿ ಬಿಕ್ಕಿ ಅಳತೊಡಗಿದರು.

ಮನೆಯ ಯಜಮಾನ ಅವನನ್ನು ಹಿಡಿದು ನಿಲ್ಲಿಸಿ ಕೇಳಿದರು: ''ಏನಾಯಿತು ಗೆಳೆಯಾ?''

''ಸಹೋದರಾ, ನನಗೆ ಅಭಯ ನೀಡಬೇಕು.'' ಕಳಕಳಿಯಿಂದ ಬಿನ್ನವಿಸಿಕೊಂಡರು.

''ನೀನು ನನ್ನಿಂದ ಏನನ್ನು ನಿರೀಕ್ಷಿಸುತ್ತಿರುವಿ'' ಮನೆಯ ಯಜಮಾನನ ಪ್ರಶ್ನೆ.

''ನನ್ನನ್ನು ಹಿಂಬಾಲಿಸುವವರಿಂದ ರಕ್ಷಿಸಬೇಕು ಸಹೋದರಾ.''

''ಅವರು ನಿನ್ನನ್ನು ಹಿಂಬಾಲಿಸುತ್ತಿರುವುದೇಕೆ?''

ಆ ವ್ಯಕ್ತಿಯು ರಸ್ತೆಯಲ್ಲಿ ನಡೆದ ವೃತ್ತಾಂತವನ್ನು ವಿವರಿಸಿದರು. ಮನೆಯ ಯಜಮಾನ ಆಲೋಚಿಸ ತೊಡಗಿದರು. ತಪ್ಪು ಯಾರದೆಂದು ಯೋಚಿಸುತ್ತಾ ಸಮಯ ಕಳೆಯುವ ಹೊತ್ತಲ್ಲ ಇದು. ಅದು ನನ್ನ ಹೊಣೆಗಾರಿಕೆಯೂ ಅಲ್ಲ. ಅಭಯ ಯಾಚಿಸಿ ಬಂದವನನ್ನು ಸ್ವೀಕರಿಸಬೇಕೋ ಅಥವಾ ತೊರೆಯಬೇಕೋ ಎಂಬುದು ಈಗ ನನ್ನ ಮುಂದಿರುವ ಸವಾಲು. ದೇವನಿಚ್ಛಿಸದೆ ಈ ವ್ಯಕ್ತಿ ಇಲ್ಲಿಗೆ ಬರಲು ಸಾಧ್ಯವಿಲ್ಲ. ಇವನಿಗೆ ಅಭಯ ನೀಡುವುದರಲ್ಲಿ ದೇವನ ಹಿತ ಅಡಗಿದೆ.



ಬೇರೇನನ್ನೂ ಯೋಚಿಸದೆ ಮನೆಯ ಯಜಮಾನನು ಆಗಂತುಕನನ್ನು ಮನೆಯೊಳಗೆ ಕರೆದೊಯ್ದು ಒಂದು ಸುರಕ್ಷಿತ ಕೋಣೆಯಲ್ಲಿ ಅವರಿಗೆ ಅಭಯ ನೀಡಿದರು. ತನಗಾಗಿ ತಯಾರಿಸಲಾದ ಉಪಹಾರದಿಂದ ಅವರಿಗೂ ನೀಡಿ ಸತ್ಕರಿಸಿದರು. ಅಷ್ಟರ ಹೊತ್ತಿಗೆ ಮನೆಯ ಅಂಗಳದಲ್ಲಿ ಜನರ ಕೋಲಾಹಲ ಕೇಳಿಬಂತು.

ಕೂಡಲೇ ಮನೆಯ ಯಜಮಾನ ಕೋಣೆಯ ಬಾಗಿಲನ್ನು ಹಿಂಭಾಗದಿಂದ ಚಿಲಕ ಹಾಕಿ ಹೊರ ಬಂದರು. ಅನೇಕ ಮಂದಿ ಒಂದು ಶವ ಮಂಚವನ್ನು ಹೊತ್ತು ಅಂಗಳದಲ್ಲಿ ನಿಂತಿದ್ದರು. ಆ ಗುಂಪಿನಲ್ಲಿ ಅವರ ನೆರೆಕರೆಯವನೂ ಇದ್ದ. ಅದು ಯಾರ ಶವವೆಂದು ತಿಳಿಯಲು ಮನೆಯ ಯಜಮಾನನ ಮನಸ್ಸು ಹಾತೊರೆಯಿತು. ಆಗ ಗುಂಪಿನಲ್ಲಿದ್ದ ನೆರೆಕರೆಯವನು ಅವರ ಕೈ ಹಿಡಿದು ಸಂತಾಪ ಸೂಚಿಸಿದರು. ಅವರಿಗೆ ಏನೊಂದೂ ಅರ್ಥವಾಗುತ್ತಿಲ್ಲ. ಹೃದಯದಲ್ಲಿ ಭಾರೀ ಕಂಪನ. ಮತ್ತೊಬ್ಬ ಹತ್ತಿರ ಬಂದು ''ಶೇಖ್....ನಿಮ್ಮ ಮಗ....''

ನಿಯಂತ್ರಣ ತಪ್ಪಿದ ಮನೆಯ ಯಜಮಾನ ಶವಮಂಚದ ಬಳಿಗೆ ಓಡಿಹೋಗಿ ಅದರ ಮೇಲಿದ್ದ ಬಿಳಿ ಬಟ್ಟೆಯನ್ನು ಸರಿಸಿದರು. ಮಗನ ಮೃತ ದೇಹವನ್ನು ಕಂಡು ಪ್ರಜ್ಞಾಹೀನರಾದರು. ಆ ಯುವಕ ಮನೆಯ ಯಜಮಾನನ ಏಕೈಕ ಪುತ್ರನಾಗಿದ್ದ. ಎಲ್ಲರಿಗೂ ಶೇಖ್‌ರ ಮೇಲೆ ಬಹಳ ಗೌರವವಿತ್ತು. ಇದೀಗ ಅವರ ಮಗ ಮರಣ ಹೊಂದಿದ್ದಾನೆ. ಅವರ ಪತ್ನಿಯು ಎಂದೋ ಸಾವನ್ನಪ್ಪಿದ್ದಾರೆ. ಪ್ರಜ್ಞೆ ತಪ್ಪಿ ಬಿದ್ದಿರುವ ಮನೆಯ ಯಜಮಾನರ ಮುಖಕ್ಕೆ ಯಾರೋ ನೀರು ಚಿಮುಕಿಸಿದರು. ಶೇಖ್ ಕಣ್ಣುಗಳನ್ನು ತೆರೆಯುತ್ತಾ ''ನನ್ನ ಮಗನಿಗೇನಾಯಿತು?'' ಎಂದು ಪ್ರಶ್ನಿಸಿದರು. ಘಟನೆಯ ಪ್ರತ್ಯಕ್ಷದರ್ಶಿಯಾಗಿದ್ದ ಒಬ್ಬ ದಾರಿಹೋಕನು ನಡೆದ ವೃತ್ತಾಂತವನ್ನೆಲ್ಲಾ ವಿವರಿಸಿದರು. ಇದಕ್ಕೆ ಕಾರಣಕರ್ತನಾದ ಯಾತ್ರಿಕನು ಓಡಿ ಹೋದ ವಿಷಯವನ್ನು ತಿಳಿಸಿದರು.

ತಾನು ಕೇಳುತ್ತಿರುವುದು ಸತ್ಯವೇ ಎಂದು ಒಂದು ಬಾರಿ ಯಜಮಾನನು ಸಂಶಯ ಪಟ್ಟರು. ಈಗ ಅವರಿಗೆ ತಾನು ಅಭಯ ನೀಡಿರುವ ವ್ಯಕ್ತಿ ತನ್ನ ಮಗನ ಕೊಲೆಗಾರನಾಗಿದ್ದಾನೆಂದು ಖಚಿತವಾಯಿತು. ಹೃದಯದಲ್ಲಿ ಭಾರೀ ಕೋಲಾಹಲವುಂಟಾಯಿತು. ಅನಿಯಂತ್ರಿತವಾದ ಮಾನಸಿಕ ಸಂಘರ್ಷವನ್ನು ಅದುಮಿಡಲು ಪ್ರಯತ್ನಿಸಿದರು. ''ಕೊಲೆಗಾರ ಇಲ್ಲಿ ಹತ್ತಿರದಲ್ಲೇ ಇರಬಹುದು. ನಾವು ಖಂಡಿತವಾಗಿಯೂ ಕಂಡು ಹಿಡಿಯ ಬಲ್ಲೆವು'' ಎಂದು ಒಬ್ಬ ವ್ಯಕ್ತಿ ಹೇಳಿದ. ಶೇಖ್ ಏನೂ ಮಾತನಾಡಲಿಲ್ಲ. ಅವರು ಆತ್ಮನಿಯಂತ್ರಣಕ್ಕಾಗಿ ಪ್ರಯತ್ನಿಸಿದರು. ಸಂತಾಪ ಸೂಚಿಸಲು ಬಂದವರನ್ನು ಸ್ವಾಗತಿಸಿದರು. ಸಂಜೆಯಾಗುವಾಗ ಶವಸಂಸ್ಕಾರವೂ ನಡೆಯಿತು. ಕುಟುಂಬದವರೆಲ್ಲರೂ ಒಬ್ಬೊಬ್ಬರಾಗಿ ಹೊರಟು ಹೋದರು. ಇದೆಲ್ಲವನ್ನೂ ಕೋಣೆಯ ಹಿಂಭಾಗದ ಕಿಟಕಿಯ ಮೂಲಕ ಆಗಂತುಕ ವೀಕ್ಷಿಸುತ್ತಿದ್ದರು. ಮುಂದೆ ಆಗಬಹುದಾದ ಅನಾಹುತವನ್ನು ಯೋಚಿಸುತ್ತಾ ಕಾಯುತ್ತಿದ್ದರು.

ಮಧ್ಯರಾತ್ರಿ ಕೋಣೆಯ ಬಾಗಿಲು ತೆರೆಯಲ್ಪಟ್ಟಿತು. ಕೊಲೆಗಾರ ಭೀತಿಯಿಂದ ಕಂಪಿಸುತ್ತಿದ್ದಾರೆ. ಮನೆಯ ಯಜಮಾನನ ಶಾಂತ ಸ್ವರ ಕೇಳಿ ಬಂತು: ''ಗೆಳೆಯಾ! ಹೆದರಬೇಡ, ನೀವು ನನ್ನಿಂದ ಅಭಯ ಪಡೆದವರಾಗಿದ್ದೀರಿ. ನೀವು ನನ್ನ ಅತಿಥಿ. ಅದರ ಹೊರತು ನೀವೇನಾಗಬೇಕೆಂದು ನಾನರಿಯಬೇಕಾದ ಅಗತ್ಯವಿಲ್ಲ, ಹೆದರಬೇಡ. ಇಲ್ಲಿ ನಿಮಗೇನೂ ಸಂಭವಿಸಲಾರದು.'' ಕೊಲೆಗಾರನಿಗೆ ಆ ಮಾತುಗಳನ್ನು ನಂಬಲಾಗಲಿಲ್ಲ, ಅತ್ಯಾಶ್ಚರ್ಯದಿಂದ ಶೇಖ್‌ರನ್ನೇ ದಿಟ್ಟಿಸತೊಡಗಿದರು. ಶೇಖ್ ಹೊರಟು ಹೋದರು.

ಸ್ವಲ್ಪ ಸಮಯದ ನಂತರ ಶೇಖ್ ಒಂದು ಚೀಲವನ್ನು ಆತನಿಗೆ ನೀಡುತ್ತಾ ''ಗೆಳೆಯಾ, ಇದೋ ಇದರಲ್ಲಿ ಎರಡು, ಮೂರು ದಿನಗಳಿಗೆ ಬೇಕಾದ ಸ್ವಲ್ಪ ಹಣ ಇದೆ, ಈ ರಾತ್ರಿಯಲ್ಲಿಯೇ ಇಲ್ಲಿಂದ ಹೊರಟು ಹೋಗು. ಅವರು ಶೇಖ್‌ರ ಮುಂದೆ ಬಿಕ್ಕಿ ಬಿಕ್ಕಿ ಅಳುತ್ತಾ ಕ್ಷಮೆ ಯಾಚಿಸಿದರು. ಶೇಖ್ ''ಪರ್ವಾಗಿಲ್ಲ, ಎಲ್ಲವೂ ದೇವ ವಿಧಿಯಾಗಿದೆಯೆಂದು ಭಾವಿಸು.... ಈಗ ನೀವು ಆದಷ್ಟು ಬೇಗ ಇಲ್ಲಿಂದ ಹೋಗುವುದೇ ಲೇಸು.''

ಅತ್ಯಂತ ನೊಂದ ಮನದೊಂದಿಗೆ ಆಗಂತುಕ ಶೇಖ್ ನೀಡಿದ ಚೀಲವನ್ನು ಹಿಡಿದು ಭಾರವಾದ ಹೆಜ್ಜೆಗಳನ್ನಿಡುತ್ತಾ ಕತ್ತಲಿನಲ್ಲಿ ಮರೆಯಾದರು.

## 8. ಖಡ್ಗ ಮತ್ತು ಛಡಿ(ಚಾಟಿ)

ಬಂಗಾಳದ ಗಿಯಾಸುದ್ದೀನ್‌ನ ಆಡಳಿತಾವಧಿಯಲ್ಲಿ ಸಿರಾಜುದ್ದೀನ್ ಎಂಬ ವಿದ್ವಾಂಸರು ಕಾಝಿ(ಶ್ರೇಷ್ಠ ನ್ಯಾಯಾಧೀಶ)ಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಕಾಝಿಯ ನ್ಯಾಯನಿಷ್ಠೆ ಮತ್ತು ದೃಢ ತೀರ್ಮಾನಗಳು ಬಹಳ ಹೆಸರುವಾಸಿಯಾಗಿದ್ದವು. ಒಂದು ದಿನ ಓರ್ವ ಬಡಮಹಿಳೆ ಕಾಝಿಯ ಬಳಿಗೆ ಬಂದು ''ಆದರಣೀಯರಾದ ನ್ಯಾಯಾಧೀಶರೇ, ನಾನೋರ್ವ ವಿಧವೆ. ನನ್ನ ಸಂಕಟವನ್ನು ನಿಮ್ಮಲ್ಲಿ ಹೇಳಲು ಅನುಮತಿ ನೀಡಬೇಕು'' ಎಂದು ಹೇಳಿದರು.

ಕಾಝಿ ''ಹೇಳಿ, ಹೇಳಲಿಕ್ಕೇನಿದೆ?'' ಎಂದು ಪ್ರಶ್ನಿಸಿದರು.

''ಮಾನ್ಯರೇ, ನನ್ನ ಪತಿ ಮರಣ ಹೊಂದಿ ಒಂಬತ್ತು ವರ್ಷಗಳಾದವು. ನನಗೆ ಒಬ್ಬನೇ ಮಗನಿದ್ದಾನೆ. ಹದಿನಾಲ್ಕು ವರ್ಷ ಪ್ರಾಯದ ಅವನು ನನ್ನ ಪಾಲಿಗೆ ಎಲ್ಲವೂ ಆಗಿದ್ದಾನೆ'' ವಿಧವೆ ಹೇಳಿದರು.

''ಕಳೆದ ಎರಡು ದಿನಗಳ ಹಿಂದೆ ನನ್ನ ಮಗ ಮೈದಾನದಲ್ಲಿ ಆಟವಾಡುತ್ತಿರುವಾಗ ಒಂದು ಬಿಲ್ಲು ಅವನ ಬಲ ಕೈಗೆ ತಾಗಿತ್ತು. ನಾಳೆ ನನಗೆ ಆಸರೆಯಾಗಬೇಕಿದ್ದ ಅವನಿಗೆ ಆ ಕೈಯಲ್ಲಿ ಏನಾದರೂ ಕೆಲಸ ಮಾಡಬಹುದೇ ಎಂಬುದನ್ನು ವೈದ್ಯರು ಕೂಡಾ ಸಂಶಯ ತಾಳುತ್ತಾರೆ.'' ವಿಧವೆಯ ಕಣ್ಣುಗಳು ತುಂಬಿದವು.

ಕಾಝಿ ಕೇಳಿದರು: ''ಹೇಳಿ ಸಹೋದರಿ, ಈ ಕುಕೃತ್ಯವೆಸಗಿದವರು ಯಾರು?'' ಮಹಿಳೆ ಸುಮ್ಮನಿದ್ದರು. ತನ್ನ ಅಳುವನ್ನು ನಿಲ್ಲಿಸಲು ಬಹಳ ಕಷ್ಟಪಟ್ಟರು. ಕಾಝಿ ಪುನಃ ಕೇಳಿದರು: ''ಬಿಲ್ಲು ಎಸೆದವರು ಯಾರೆಂದು ಹೇಳಿ?''

ಅವರು ಅಳುತ್ತಾ: ''ಮಾನ್ಯರೇ, ಬೇರೆ ಇನ್ಯಾರೇ ಆಗಿದ್ದರೂ ಯಾವುದೇ ಮುಲಾಜಿಲ್ಲದೆ ಹೇಳ ಬಹುದಿತ್ತು. ಆದರೆ, ಇದು.....

''ಈ ಕೃತ್ಯವನ್ನೆಸಗಿದವರು ಯಾರೆಂದು ನಿಮ್ಮ ಬಳಿ ಏನಾದರೂ ಆಧಾರವಿದೆಯೇ'' ಕಾಝಿ ಕೇಳಿದರು.

ಸ್ವಲ್ಪ ಹೊತ್ತು ಮೌನವಾಗಿದ್ದ ವಿಧವೆಯು ತನ್ನ ಕಣ್ಣೀರನ್ನು ಒರೆಸುತ್ತಾ: ''ಇದನ್ನು ಮಾಡಿದವರು ನಮ್ಮ ದೇಶವನ್ನಾಳುವ ಸುಲ್ತಾನರಾಗಿದ್ದಾರೆ.''

ಆ ಮಾತುಗಳನ್ನಾಲಿಸಿದ ಕಾಝಿಯು ದಿಗ್ಭ್ರಾಂತರಾದರು. ಇದು ಸುಲ್ತಾನ್ ಗಿಯಾಸುದ್ದೀನರ ವಿರುದ್ಧ ಕಾಝಿ ಕೇಳುತ್ತಿರುವ ಮೊದಲ ಆರೋಪವಾಗಿತ್ತು.

''ನಿಮಗೆ ಈ ಆರೋಪವನ್ನು ಮುಂದಿಡಲು ಸೂಕ್ತವಾದ ಆಧಾರಗಳೇನಾದರೂ ಇದೆಯೇ?'' ಕಾಝಿ ಪುನಃ ಕೇಳಿದರು.

ವಿಧವೆ ಇದೆಯೆಂದು ಹೇಳಿ ಇಬ್ಬರು ಸಾಕ್ಷಿದಾರರನ್ನು ಹಾಜರು ಪಡಿಸಿದರು.

ಅವರ ಸಾಕ್ಷ್ಯವು ಸ್ವೀಕಾರಾರ್ಹವೆಂಬುದನ್ನು ಕಾಝಿ ಖಚಿತ ಪಡಿಸಿದರು. ಅದಕ್ಕೆ ಬೇಕಾದ ವ್ಯವಸ್ಥೆಗಳನ್ನು ಮಾಡುವೆನೆಂದು ಹೇಳಿ ಕಾಝಿ ವಿಧವೆಗೆ ಆಶ್ವಾಸನೆ ನೀಡಿ ಕಳುಹಿಸಿದರು.



ವಿಧವೆ ಮರಳಿ ಹೋದ ನಂತರ ಕಾಝಿಯವರು ವಿಷಯದ ಗಂಭೀರತೆಯನ್ನು ಮನಗಂಡರು. ಮೊಕದ್ದಮೆಯು ಸುಲ್ತಾನನ ವಿರುದ್ಧವಾಗಿದೆ. ವಾದಿಗೆ ನ್ಯಾಯ ದೊರಕದಿದ್ದರೆ ಕಾಝಿಯು ದೇವಶಿಕ್ಷೆಗೆ ಗುರಿಯಾಗಬೇಕಾಗುವುದು. ಆಡಳಿತಗಾರನೆಂಬ ಕಾರಣದಿಂದ ಸುಲ್ತಾನರೊಂದಿಗೆ ಪಕ್ಷಪಾತ ತೋರಿದರೆ ಈ ಕೆಲಸದ ವಿಶ್ವಾಸಾರ್ಹತೆ ನಷ್ಟ ಹೊಂದೀತು. ಆದ್ದರಿಂದ ಸುಲ್ತಾನ್‌ರ ವಿಚಾರಣೆ ನಡೆಸಿಯೇ ಸಿದ್ಧ. ತಪ್ಪಿತಸ್ಥವಾಗಿದ್ದರೆ ಶಿಕ್ಷಿಸಲ್ಪಡಲೇ ಬೇಕು.

ಸುಲ್ತಾನರನ್ನು ನ್ಯಾಯಾಲಯಕ್ಕೆ ಕರೆದು ತರಬೇಕು. ಅದು ಅಷ್ಟು ಸುಲಭದ ಕೆಲಸವೇನಲ್ಲ. ಸುಲ್ತಾನರ ಪ್ರತಿಕ್ರಿಯೆ ಹೇಗೆಂಬುದೂ ತಿಳಿದಿಲ್ಲ. ಆದರೆ ಸುಲ್ತಾನರ

ಒಳಿ ಹೋಗಿ ವಿಷಯವೇನೆಂದು ಕೇಳೋಣವೆಂದರೆ ಅದೂ ಅಸಾಧ್ಯ. ಒಟ್ಟಿನಲ್ಲಿ ಕಾಝಿಯವರು ಸುಲ್ತಾನರನ್ನು ನ್ಯಾಯಾಲಯಕ್ಕೆ ಕರೆಸಿಕೊಳ್ಳುವುದೆಂದು ತೀರ್ಮಾನಿಸಿದರು.

ಕಾಝಿಯವರು ತನ್ನ ಒಬ್ಬ ಸಮರ್ಥ ಯೋಧನನ್ನು ಅದಕ್ಕಾಗಿ ಆಯ್ಕೆ ಮಾಡಿದರು. ಸುಲ್ತಾನರು ತಕ್ಷಣವೇ ನ್ಯಾಯಾಲಯಕ್ಕೆ ಹಾಜರಾಗಬೇಕೆಂಬ ಆಜ್ಞೆಯನ್ನು ಆ ಯೋಧನ ಕೈಯಲ್ಲಿ ಕೊಟ್ಟು ಕಳುಹಿಸಿದರು. ತಾನು ಮಾಡಲಿಕ್ಕೆ ಹೋಗುತ್ತಿರುವುದು ಒಂದು ಕ್ಷುಲ್ಲಕ ಕಾರ್ಯವಲ್ಲ ಎಂಬುದು ಯೋಧನಿಗೆ ಚೆನ್ನಾಗಿ ತಿಳಿದಿತ್ತು. ಅರಮನೆಯೊಳಗೆ ಪ್ರವೇಶಿಸುವಾಗಲೇ ತಪಾಸಣೆ ನಡೆಸಲಾಗುತ್ತದೆ. ಬಂದ ವಿಷಯವೇನೆಂದು ತಿಳಿಸಿದರೆ ಕಾವಲು ಭಟರು ಹುಚ್ಚನೆಂದೇ ಹೇಳಿ ಒಳಗೆ ಹೋಗಲು ಅನುಮತಿ ಕೊಡಲಾರರು. ತನ್ನ ಜೀವವೂ ಒಂದು ಬಿಲ್ಲಿನ ತುದಿಯಲ್ಲಿದೆ ಎಂದು ಯೋಧನಿಗೆ ಭಾಸವಾಗತೊಡಗಿತು. ಸುಲ್ತಾನರ ವಿರುದ್ಧ ಮಾತೆತ್ತಿದವರನ್ನು ಸುಮ್ಮನೆ ಬಿಡಲಾರರು. ಆದರೆ ಕಾಝಿಯವರು ವಹಿಸಿ ಕೊಟ್ಟ ಹೊಣೆಗಾರಿಕೆಯನ್ನು ನಿರ್ವಹಿಸಲೇಬೇಕು.

ಯೋಧನು ಅರಮನೆಗೆ ತಲುಪಿದನು. ಸುಲ್ತಾನರು ಪ್ರಜೆಗಳಿಗೆ ಮುಖ ತೋರಿಸುವ ಸಮಯವಾಗಿತ್ತು. ಯೋಧ ಗೋಪುರದಡಿಯಲ್ಲಿ ಬಂದು ನಿಂತನು. ತನ್ನ ಎರಡೂ ಕೈಗಳನ್ನು ಕಿವಿಯೊಳಗಿಟ್ಟು ಜೋರಾಗಿ ಅದಾನ್ ಕರೆ ಕೊಟ್ಟರು. ಪ್ರಾರ್ಥನೆಯ ಸಮಯವಾಯಿತೆಂದು ಎಲ್ಲರೂ ಭಾವಿಸತೊಡಗಿದರು. ಕಾವಲು ಭಟರಿಗೆ ಅಚ್ಚರಿಯಾಯಿತು. ಅವರು ಯೋಧನನ್ನು ಬಂಧಿಸಿದರು. ಅದಾನ್ ಕರೆ ಸುಲ್ತಾನರ ಕಿವಿಗೂ ಬಿತ್ತು. ಸೇನಾ ನಾಯಕನನ್ನು ಕರೆದು ಅದಾನ್ ನೀಡಿದವನನ್ನು ತನ್ನ ಮುಂದೆ ಹಾಜರು ಪಡಿಸಲು ಆಜ್ಞೆ ನೀಡಿದರು.

ಇತ್ತ ಕಾವಲು ಭಟರು ಅವನನ್ನು ಹುಚ್ಚನೆಂದು ಭಾವಿಸಿ ನಿಯಂತ್ರಿಸುತ್ತಿದ್ದರು. ಸೇನಾಧಿಕಾರಿಯು ಯೋಧನನ್ನು ಸುಲ್ತಾನರ ಎದುರು ತಂದು ನಿಲ್ಲಿಸಿದರು. ಅವನು ಸುಲ್ತಾನರ ಮುಂದೆ ತಲೆತಗ್ಗಿಸಿ ನಿಂತನು. ಸುಲ್ತಾನರು ನಗುತ್ತಾ: ''ಅದಾನ್ ಕರೆಕೊಟ್ಟುದರಲ್ಲಿ ವಿಶೇಷ ಕಾರ್ಯವೇನಾದರೂ ಇದೆಯೇ?'' ಎಂದು ಕೇಳಿದರು.

''ಮಹಾರಾಜರೆ, ಕ್ಷಮಿಸಬೇಕು.'' ಯೋಧ ಹೇಳಿದ.

''ಏನಾಯಿತು?'' ಸುಲ್ತಾನರು ಮರು ಪ್ರಶ್ನಿಸಿದರು. ''ಅತ್ಯಂತ ಕಷ್ಟಕರವಾದ ಒಂದು ಕೆಲಸವನ್ನು ನಿರ್ವಹಿಸಲು ಇದುವೇ ಸೂಕ್ತಮಾರ್ಗವೆಂದು ನನಗೆ ಅನಿಸಿತ್ತು. ಕ್ಷಮಿಸಬೇಕು ಮಹಾಪ್ರಭು.'' ಯೋಧ ಉತ್ತರಿಸಿದನು.

''ವಿಷಯವೇನು?''

''ನಾನು ಬಂದ ಕಾರ್ಯವನ್ನು ನಿಮ್ಮೊಂದಿಗೆ ನೇರವಾಗಿ ಹೇಳದೆ ಬೇರೆ ಯಾರಲ್ಲಾದರೂ ಹೇಳಿದರೆ ನಾನು ಇದೇ ರೀತಿ ನಿಮ್ಮ ಮುಂದಿರುತ್ತಿರಲಿಲ್ಲವೇನೋ?''

''ವಿಷಯವೇನೆಂದು ಹೇಳು'' ಸುಲ್ತಾನರು ಕುತೂಹಲದಿಂದ ಪ್ರಶ್ನಿಸಿದರು.

''ಕಾಝಿಯವರು ಹೊರಡಿಸಿದ ಒಂದು ಆಜ್ಞೆಯನ್ನು ಮಹಾರಾಜರಿಗೆ ತಿಳಿಸಬೇಕೆಂಬುದು ನನಗೆ ವಹಿಸಿ ಕೊಡಲಾದ ಹೊಣೆಗಾರಿಕೆ.''

''ಧೈರ್ಯವಾಗಿ ಅದನ್ನು ತಿಳಿಸು.''

''ಬಡವಿಧವೆಯ ಒಂದು ದೂರು ಲಭಿಸಿದೆ. ಅದಕ್ಕಾಗಿ ತಾವು ವಿಚಾರಣೆಗೆ ಬರಬೇಕೆಂಬ ಆಜ್ಞೆಯೊಂದನ್ನು ಹೊರಡಿಸಲಾಗಿದೆ'' ಯೋಧ ಹೇಳಿದ.

''ವಿಚಾರಣೆಗೆ ಅರ್ಹರಾದವರು ಯಾರು?'' ಸುಲ್ತಾನರ ಪ್ರಶ್ನೆ.

''ಕ್ಷಮಿಸಬೇಕು ಪ್ರಭು, ಇದೋ ಈ ಸುತ್ತೋಲೆಯಲ್ಲಿ ಅದನ್ನು ಉಲ್ಲೇಖಿಸಲಾಗಿದೆ.'' ಯೋಧನು ಅದನ್ನು ಸೇನಾಧಿಕಾರಿಯ ಕೈಗೆ ನೀಡಿದನು. ಸುಲ್ತಾನರು ಮಂತ್ರಿಯೊಂದಿಗೆ ಓದಲು ಆದೇಶಿಸಿದರು.

ಸಂದೇಶವನ್ನು ಓದುತ್ತಿದ್ದಂತೆ ಮಂತ್ರಿಯ ಮುಖಭಾವ ಬದಲಾಗುವುದನ್ನು ಎಲ್ಲರೂ ಗಮನಿಸಿದರು. ಮಂತ್ರಿಯ ಕೈಗಳು ನಡುಗುತ್ತಿದೆ. ಸುಲ್ತಾನರು ಜೋರಾಗಿ ಓದಲು ಆಜ್ಞಾಪಿಸಿದರು. ಮೌನ ವಾತಾವರಣದಲ್ಲಿ ನಡುಗುವ ಶಬ್ದ ಹೊರ ಬಂತು. ರಾಜ್ಯಭಾರ ನಡೆಸುತ್ತಿರುವ ಸುಲ್ತಾನರೊಂದಿಗೆ ನ್ಯಾಯಾಲಯಕ್ಕೆ ಹಾಜರಾಗಬೇಕೆಂಬ ಆಜ್ಞೆಯನ್ನು ಕೇಳಿ ಎಲ್ಲರೂ ದಿಗ್ಭ್ರಮೆಗೊಂಡರು. ಯಾರೂ ಮಾತನಾಡಲಿಲ್ಲ. ಕಾಝಿಯವರು ಮಿತಿ ಮೀರುತ್ತಿರುವರೆಂದು ಅನೇಕರಿಗೆ ತೋಚಿತು. ಗಂಭೀರ ಕಾರ್ಯವೇನಾದರೂ ಇರಬಹುದೆಂದು ಇನ್ನು ಕೆಲವರು ಭಾವಿಸಿದರು.

ಸುಲ್ತಾನರು ಪಾರಿತೋಷಕಗಳನ್ನು ನೀಡಿ ಯೋಧನನ್ನು ಕಳುಹಿಸಿ ಕೊಟ್ಟರು. ಕಾಝಿಯವರನ್ನು ಹೋಗಿ ಭೇಟಿಯಾಗುವುದೆಂದು ತೀರ್ಮಾನಿಸಿದರು. ಮಂತ್ರಿಗೆ ವಿಷಯ ತಿಳಿಸಿದರು. ಸುಲ್ತಾನರು ತನ್ನ ಕೋಣೆಗೆ ಹೋಗಿ ವೇಷ ಬದಲಿಸಿದರು. ಸಾಮಾನ್ಯ ವ್ಯಕ್ತಿಯ ವೇಷ. ಉದ್ದನೆಯ ನಿಲುವಂಗಿಯ ಒಳಭಾಗದಲ್ಲಿ ಒಂದು ಖಡ್ಗವನ್ನು ಅಡಗಿಸಿಟ್ಟರು. ಸುಲ್ತಾನರು ಮಂತ್ರಿಯ ಜೊತೆಯಲ್ಲಿ ನ್ಯಾಯಾಲಯಕ್ಕೆ ಹಾಜರಾದರು. ಕಾಝಿಯವರು ಸುಲ್ತಾನರೊಂದಿಗೆ ಕಟಕಟೆಗೆ ಏರಲು ಆಜ್ಞಾಪಿಸಿದರು. ನೆರೆದ ಜನರ ಹೃದಯ ಕಂಪಿಸತೊಡಗಿತು.

ಕಾಝಿಯವರು: ''ನಿಮ್ಮ ಬಿಲ್ಲಿನಿಂದ ಒಂದು ಮಗುವಿಗೆ ಗಾಯವಾಗಿದೆ ಯೆಂದು ಒಬ್ಬ ಮಹಿಳೆ ದೂರು ಸಲ್ಲಿಸಿದ್ದಾರೆ'' ಎಂದು ಹೇಳುತ್ತಾ ನಡೆದ ವೃತ್ತಾಂತವನ್ನು ವಿವರಿಸಿದರು. ತರುವಾಯ ಹೇಳಿದರು: ''ಸಾಕ್ಷಿಗಳು ಸಿಕ್ಕಿದ್ದಾರೆ.'' ಪ್ರತಿ ವಾದಿಗೆ ಏನಾದರೂ ಹೇಳಲಿಕ್ಕಿದೆಯೇ?''

ವಿಧವೆಯು ಒಂದು ಮೂಲೆಯಲ್ಲಿ ಕುಳಿತು ಇವೆಲ್ಲವನ್ನೂ ವೀಕ್ಷಿಸುತ್ತಿದ್ದರು. ನಂಬಲಸಾಧ್ಯವಾದ ದೃಶ್ಯವನ್ನು ಕಂಡು ಅವರ ಹೃದಯ ಕಂಪಿಸತೊಡಗಿತ್ತು. ಸುಲ್ತಾನರಿಗೆ ಆ ಘಟನೆ ನೆನಪಿಗೆ ಬಂತು. ಹೌದು, ಎರಡು ದಿನಗಳ ಹಿಂದೆ ಬಾಣವನ್ನು ಎಸೆಯುವ ಅಭ್ಯಾಸ ಮಾಡುತ್ತಿರುವಾಗ ಒಂದು ಬಾಣ ಗುರಿ ತಪ್ಪಿ ಯಾರದೋ ಮೈಗೆ ತಾಗಿತ್ತೆಂಬುದು ತಿಳಿದಿತ್ತು. ಯಾರಿಗೆ ತಾಗಿತ್ತೆಂಬುದು ಗೊತ್ತಿರಲಿಲ್ಲ. ಅದಕ್ಕೆ, ಅವರಿಗೆ ಬೇಕಾದ ಚಿಕಿತ್ಸೆ ನೀಡಲು ವ್ಯವಸ್ಥೆ ಮಾಡಲಾಗಿತ್ತು. ಆದರೆ ಅದೊಂದು ಮೊಕದ್ದಮೆಯಾಗಿ ಬರಬಹುದೆಂದು ಭಾವಿಸಿರಲಿಲ್ಲ.

''ಬೇರೇನಾದರೂ ಹೇಳಲಿಕ್ಕಿದೆಯೇ?'' ಕಾಝಿ ಪುನಃ ಪ್ರಶ್ನಿಸಿದರು.

''ಹೌದು, ನನ್ನಿಂದ ಅದು ಸಂಭವಿಸಿತ್ತು'' ಸುಲ್ತಾನ್ ಉತ್ತರಿಸಿದರು.

ಕಾಝಿಯವರು ವಿಧವೆಯನ್ನು ಕರೆದು ಸುಲ್ತಾನರನ್ನುದ್ದೇಶಿಸಿ ''ಈ ವಿಧವೆಯ ಹೃದಯಕ್ಕೆ ತಾಗಿದ್ದ ನೋವಿನ(ಗಾಯದ) ಆಳವೆಷ್ಟೆಂದು ಗೊತ್ತಿದೆಯಾ?'' ಸುಲ್ತಾನರು ತಲೆತಗ್ಗಿಸಿ ''ನಾನು ನನ್ನ ತಪ್ಪನ್ನು ಒಪ್ಪಿಕೊಳ್ಳುತ್ತೇನೆ.''

''ಇವರಿಗೆ ಹೇಗೆ ಆಶ್ವಾಸನೆ ಕೊಡಬಹುದು.'' ಕಾಝಿಯ ಪ್ರಶ್ನೆ.

ಸುಲ್ತಾನರು ಕಟಕಟೆಯಿಂದ ಕೆಳಗಿಳಿದು ಬಂದು ವಿನೀತಭಾವದೊಂದಿಗೆ ವಿಧವೆಯನ್ನುದ್ದೇಶಿಸಿ ಹೇಳಿದರು: ''ಸಹೋದರಿ, ನನ್ನನ್ನು ಕ್ಷಮಿಸು. ನನ್ನಿಂದಾದ ಪ್ರಮಾದಕ್ಕೆ ನಾನು ಯಾವ ಪ್ರಾಯಶ್ಚಿತ್ತ ನೀಡಲೂ ಸಿದ್ಧನಾಗಿದ್ದೇನೆ. ನಷ್ಟ ಪರಿಹಾರ ನೀಡಲು ನಾನು ಬಾಧ್ಯಸ್ತನಾಗಿರುತ್ತೇನೆ.''

ಕಾಝಿ: ''ಹೇಳಿ ಸಹೋದರಿ, ನಷ್ಟ ಪರಿಹಾರವೇನು?''

ವಿಧವೆಯ ಕಣ್ಣುಗಳಿಂದ ಅಶ್ರುಧಾರೆ ಹರಿಯ ತೊಡಗಿತು. ಅವರ ಬಿಕ್ಕಳಿಕೆಯು ವಾತಾವರಣದಲ್ಲಿ ಮೊಳಗಿತು: ''ನ್ಯಾಯ ನಿಷ್ಠರಾದ ನ್ಯಾಯಾಧೀಶರೇ, ಇದಕ್ಕಿಂತಲೂ ಮಿಗಿಲಾದ ನಷ್ಟ ಪರಿಹಾರ ಬೇರೇನಿದೆ? ತಪ್ಪು ಯಾರು ಮಾಡಿದರೂ ಸಮಾನ ರೀತಿಯಲ್ಲಿ ಕಾಣುವ ಈ ನ್ಯಾಯನಿಷ್ಠೆಯನ್ನು ಕಂಡು ನನಗೆ ಅಚ್ಚರಿಯಾಗುತ್ತಿದೆ. ಪ್ರಮಾದಕ್ಕಾಗಿ ಪಶ್ಚಾತ್ತಾಪ ಪಡುವ ಆಡಳಿತಗಾರರೇ, ಎಲ್ಲರಿಗೂ ಮಿಗಿಲಾಗಿ ನಾನು ನಿಮ್ಮನ್ನು ಗೌರವಿಸುತ್ತೇನೆ. ನನ್ನ ಮಗನ ಗಾಯವು ಆದಷ್ಟು ಬೇಗ ಗುಣಮುಖವಾಗಲೆಂದು ಪ್ರಾರ್ಥಿಸಿ. ಅದುವೇ ನನ್ನ ಪಾಲಿಗೆ ನಷ್ಟ ಪರಿಹಾರವಾಗಿಹುದು ಮಹಾರಾಜರೇ...''

ಸುಲ್ತಾನರ ಕಣ್ಣುಗಳು ತುಂಬಿಬಂತು.

''ದೂರು ನೀಡಿದವರಿಗೆ ನಷ್ಟ ಪರಿಹಾರ ಲಭಿಸಿದ್ದ ಕಾರಣ ಪ್ರತಿವಾದಿಯನ್ನು ಬಿಡುಗಡೆಗೊಳಿಸಲಾಗುತ್ತಿದೆ'' ಕಾಝಿ ಘೋಷಿಸಿದರು. ಕಾಝಿಯವರು ಆ

ಕೂಡಲೇ ತನ್ನ ವೇಷವನ್ನು ಕಳಚಿ ಸುಲ್ತಾನರಿಗೆ ವಂದಿಸುತ್ತಾ: ''ಮಹಾರಾಜರೇ (ಪ್ರಭೂ) ನ್ಯಾಯ ನಿಷ್ಠೆಯೊಂದಿಗೆ ನನ್ನ ಕರ್ತವ್ಯ ನೆರವೇರಿಸಲು ಸಾಧ್ಯವಾಯಿತು. ನಿಮಗೆ ನೀಡಿದ ಸಂಕಷ್ಟಕ್ಕಾಗಿ ಕ್ಷಮಿಸಬೇಕು.''

ಸುಲ್ತಾನರು ಕಾಝಿಯವರನ್ನು ಅಭಿನಂದಿಸುತ್ತಾ: ''ನಿಮ್ಮಂತಹವರ ನ್ಯಾಯ ನಿಷ್ಠೆ ಮತ್ತು ನಿಶ್ಚಯದಾರ್ಢ್ಯತೆಯು ಈ ದೇಶದ ಶಕ್ತಿಯಾಗಿದೆ. ಒಂದು ವೇಳೆ ನೀವು ಕಾನೂನು ಪ್ರಕಾರ ತೀರ್ಮಾನ ತೆಗೆಯದಿರುತ್ತಿದ್ದರೆ.....'' ಎಂದು ಹೇಳಿದರು. ತರುವಾಯ ತನ್ನ ನಿಲುವಂಗಿಯ ಒಳಗೆ ಅಡಗಿಸಿಟ್ಟ ಖಡ್ಗವನ್ನು ಹೊರತೆಗೆದು ''ಹಾಗೆ ತೀರ್ಮಾನ ಮಾಡದಿರುತ್ತಿದ್ದರೆ ಇದೋ ಈ ಖಡ್ಗದಿಂದ ನಿಮಗೆ ಶಾಸ್ತಿಯಾಗುತ್ತಿತ್ತು'' ಎಂದು ಹೇಳಿದರು.

ಆಗ ಕಾಝಿಯವರು ಕೋಣೆಯೊಳಗೆ ಮೇಜಿನ ಅಡಿಯಲ್ಲಿ ಅಡಗಿಸಿಡಲಾಗಿದ್ದ ಚಾಟಿಯನ್ನು ಹೊರಗೆ ತೋರಿಸಿ: ''ಪ್ರಭೂ, ಪವಿತ್ರ ಕಾನೂನಿನ ವಿರುದ್ಧ ನೀವು ಕೃತ್ಯವೆಸಗಿರುತ್ತಿದ್ದರೆ ಒಬ್ಬ ನ್ಯಾಯಾಧೀಶನ ಶಿಕ್ಷೆ ನಿಮಗೆ ಲಭಿಸುತ್ತಿತ್ತು.... ಬಡ ಮಹಿಳೆಯೊಂದಿಗೆ ಕ್ಷಮೆ ಕೇಳದೇ ಇರುತ್ತಿದ್ದರೆ, ನಷ್ಟ ಪರಿಹಾರ ನೀಡಲು ಮುಂದಾಗದಿರುತ್ತಿದ್ದರೆ... ಈ ಚಾಟಿಯಿಂದ ನಿಮ್ಮ ಬೆನ್ನಿಗೆ ಹನ್ನೆರಡು ಛಡಿಯೇಟು ಬೀಳುತ್ತಿತ್ತು.'' ಸುಲ್ತಾನರು ಕಾಝಿಯವರನ್ನು ಆಲಿಂಗಿಸಿದರು. ಪ್ರಜೆಗಳಿಗೆ ಅದೊಂದು ಆತ್ಮಾಭಿಮಾನದ ದೃಶ್ಯವಾಗಿತ್ತು.

● ಗಿಯಾಸುದ್ದೀನ್ ಗುಲಾಮನಾಗಿ ಜನಿಸಿ, ಸ್ವಂತ ಪ್ರಯತ್ನದಿಂದ ದೆಹಲಿಯ ಆಡಳಿತಗಾರನಾದ ವ್ಯಕ್ತಿಯಾಗಿದ್ದಾರೆ(1246-1284).

# 9. ರಾಜ್ಯದ ಬೆಳಕು



ಅಲಾವುದ್ದೀನ್ ಖಿಲ್ಜಿ ದೆಹಲಿಯ ಆಡಳಿತ ನಡೆಸುತ್ತಿದ್ದ ಕಾಲ. ಉತ್ತರ ಮತ್ತು ದಕ್ಷಿಣ ಭಾರತದ ಅನೇಕ ರಾಜ್ಯಗಳು ಸುಲ್ತಾನರ ಅಧೀನದಲ್ಲಿತ್ತು. ಮರಾಠದ ದೇವಗಿರಿಯನ್ನು ಅಧೀನ ಪಡಿಸಿದ್ದು ಅಲ್ಲಾವುದ್ದೀನರ ವಿಜಯಗಳ ಪೈಕಿ ಅತ್ಯಂತ ಶ್ರೇಷ್ಠವಾದುದಾಗಿತ್ತು. ಪರಂಪರಾಗತ ಸಮೃದ್ಧಿಯಿಂದ ಹೆಸರು ವಾಸಿಯಾಗಿದ್ದ ದೇವಗಿರಿಯನ್ನು ಸುಲ್ತಾನರ ಧೀರ ಯೋಧರು ವಶಪಡಿಸಿದಾಗ ಧಾರಾಳ ಸೊತ್ತು ಸಂಪತ್ತುಗಳು ಲಭಿಸಿದ್ದವು. ವಶಪಡಿಸಲಾದ ಎಲ್ಲ ಸೊತ್ತುಗಳನ್ನು ಸೇನಾಧಿಕಾರಿಯು ಅಲಾವುದ್ದೀನ್ ಖಿಲ್ಜಿಯ ಬಳಿಗೆ ತಲುಪಿಸಿದರು. ಸುಲ್ತಾನರು ಬೆಲೆಬಾಳುವ ಸೊತ್ತುಗಳನ್ನು ತನ್ನ ವೈಯಕ್ತಿಕ ಸಂಪಾದನೆಗೆ ಸೇರಿಸಲು ಆಸೆಪಟ್ಟರು. ಈ ವಿಷಯವು ಕಾಝಿಯವರಿಗೆ ತಲುಪಿತು. ನ್ಯಾಯನಿಷ್ಠೆ ಮತ್ತು ನಿಶ್ಚಯ ದಾರ್ಢ್ಯತೆಯಲ್ಲಿ ಹೆಸರು ಗಳಿಸಿದ್ದ ಕಾಝಿಯವರಿಗೆ ಅದನ್ನು ಸಹಿಸಲಾಗಲಿಲ್ಲ. ತಪ್ಪು ಯಾರು ಮಾಡಿದರೂ ಅದನ್ನು ಬೊಟ್ಟು ಮಾಡಿ ತೋರಿಸುತ್ತಿದ್ದ ಕಾಝಿಯವರು ದೇವಗಿರಿಯ ಸೊತ್ತುಗಳಿಗೆ ಸಂಬಂಧಿಸಿದ ಸುಲ್ತಾನರ ವ್ಯಾಮೋಹ ಕೂಡಾ ಸರಿಯಲ್ಲವೆಂಬುದನ್ನು ಮನಗಂಡರು. ಕಾನೂನಿನ ಪ್ರಕಾರ ಅದು ಸಾರ್ವಜನಿಕ ಬೊಕ್ಕಸಕ್ಕೆ ಸೇರಬೇಕು. ಈ ವಿಷಯವನ್ನು ಹೇಗೆ ತಿಳಿಸುವುದೆಂದು ಕಾಝಿಯವರು ಚಿಂತಿಸ ತೊಡಗಿದರು. ಇದು ಸುಲ್ತಾನರ ಕ್ರೋಧಕ್ಕೆ ಕಾರಣವಾಗಬಹುದು. ಕೆಲವೊಮ್ಮೆ ಜೀವಕ್ಕೆ ಹಾನಿಯಾಗಲೂ ಬಹುದು. ಆದರೆ ಪವಿತ್ರ ಕಾನೂನಿನ ವಿರುದ್ಧ ವರ್ತಿಸುವವರು ಯಾರೇ ಆದರೂ ಅದಕ್ಕೆ

ಸೂಕ್ತವಾದ ತೀರ್ಮಾನಗಳನ್ನು ತೆಗೆಯಬೇಕಾದುದು ತನ್ನ ಕರ್ತವ್ಯವೆಂದು ಕಾಝಿಯವರು ಭಾವಿಸಿದರು. ಸುಲ್ತಾನರ ವಿರುದ್ಧ ಮಾತನಾಡುವ ಸಾಮರ್ಥ್ಯ ಯಾರಿಗೂ ಇರಲಿಲ್ಲ, ಅಂತಹವನನ್ನು ದೇಶದ್ರೋಹಿ ಅಥವಾ ಹುಚ್ಚನೆಂದು ಮುದ್ರೆ ಹಾಕಲಾಗುತ್ತದೆ. ಕಾಝಿಯವರ ಹೃದಯದಲ್ಲಿ ಭಾರೀ ಕೋಲಾಹಲವುಂಟಾಯಿತು.

ಕೊನೆಗೂ, ಕಾಝಿಯವರು ಸುಲ್ತಾನರಿಗೆ ಒಂದು ಸಂದೇಶ ಕಳುಹಿಸಿದರು. ಅದರಲ್ಲಿ ದೇವಗಿರಿಯಿಂದ ವಶಪಡಿಸಲಾದ ಸೊತ್ತುಗಳನ್ನು ಸಾರ್ವಜನಿಕ ಬೊಕ್ಕಸಕ್ಕೆ ಸೇರಿಸಬೇಕೆಂದು ಉಲ್ಲೇಖಿಸಲಾಗಿತ್ತು. ಸುಲ್ತಾನರು ಕಾಝಿಯವರನ್ನು ಅರಮನೆಗೆ ಕರೆಸಿಕೊಂಡರು. ದರ್ಬಾರಿನಲ್ಲಿ ಮಂತ್ರಿ ಮಾಗಧರೂ ಸೇನಾಮುಖ್ಯಸ್ಥರೆಲ್ಲರೂ ಇದ್ದರು. ಸುಲ್ತಾನರು ಯಾವುದೇ ಮುನ್ನುಡಿಯಿಲ್ಲದೆ ಕಾಝಿಯವರನ್ನುದ್ದೇಶಿಸಿ: ''ಮಾನ್ಯರೇ, ತಾವು ಕಳುಹಿಸಿದ ಸಂದೇಶದ ಹಿಂದಿರುವ ಉದ್ದೇಶವೇನು?'' ಎಂದು ಕೇಳಿದರು.

''ಕೇವಲ ಒಂದು ಉದ್ದೇಶ ಮಾತ್ರ. ದೇಶದ ಸಕಲ ವ್ಯವಹಾರಗಳೂ ಕಾನೂನು ಪ್ರಕಾರ ನಡೆಯಬೇಕೆಂದು ತಿಳಿಸುವುದು ನನ್ನ ಕರ್ತವ್ಯವೆಂದು ತೋಚಿತು'' ಕಾಝಿಯವರು ಉತ್ತರಿಸಿದರು.

''ಕಾನೂನಿನ ದೃಷ್ಟಿಯಲ್ಲಿ ರಾಜನ ಸೇವಕರು ವಶಪಡಿಸಿದ ಸೊತ್ತುಗಳ ಮೇಲೆ ರಾಜನಿಗೆ ಹಕ್ಕಿಲ್ಲವೇ? ಸುಲ್ತಾನ್ ಪ್ರಶ್ನಿಸಿದರು.

ಸಭಿಕರೆಲ್ಲರೂ ಮೌನವಾಗಿ ನಿಂತಿದ್ದರು. ಕಾಝಿಯವರು ಏನೂ ಉತ್ತರಿಸಲಿಲ್ಲ, ಸುಲ್ತಾನರ ಕಡೆಗೆ ನೋಡಲೂ ಇಲ್ಲ. ಸುಲ್ತಾನರು ಪುನಃ ಪ್ರಶ್ನಿಸಿದರು.

''ಹೇಳಿ, ಈ ಸಂಪತ್ತಿನಲ್ಲಿ ನನಗೆ ಹಕ್ಕಿಲ್ಲವೆಂಬುದು ನಿಮ್ಮ ವಾದವೇ?''

''ನಾನು ಸತ್ಯಸಂಧನಾಗಿರಬೇಕೆಂದು ಆಶಿಸುತ್ತೇನೆ.''

''ನಿಮ್ಮ ವೈಯಕ್ತಿಕ ಅಭಿಪ್ರಾಯವೇನು?''

''ಕಾನೂನು ಪ್ರಕಾರ ಮಾತ್ರ ನನಗೆ ಉತ್ತರಿಸಲು ಸಾಧ್ಯ.''

''ಹೇಳಿ, ಹಾಗಾದರೆ ನಿಮ್ಮ ಅಭಿಪ್ರಾಯವೇನು?''

''ದೇವಗಿರಿಯಿಂದ ವಶಪಡಿಸಲಾದ ಸೊತ್ತುಗಳು ಸೇನೆಯ ಪರಾಕ್ರಮದಿಂದ ಲಭಿಸಿರುವುದಾಗಿದೆ. ಅದು ವ್ಯಕ್ತಿಗಲ್ಲ, ಆದ್ದರಿಂದ ಅದು ಸಾರ್ವಜನಿಕ ಬೊಕ್ಕಸಕ್ಕೆ ಮಾತ್ರ ಸೇರಬೇಕಾಗಿದೆ'' ಎಂದು ಕಾಝಿಯವರು ತನ್ನ ಅಭಿಪ್ರಾಯವನ್ನು ಮುಂದಿಟ್ಟರು. ಕಾಝಿಯವರ ಮಾತುಗಳನ್ನಾಲಿಸಿದ ನೆರೆದವರೆಲ್ಲರ ಹೃದಯ ಕಂಪಿಸ ತೊಡಗಿತು. ಸುಲ್ತಾನರ ಮುಖಭಾವ ಬದಲಾಗುತ್ತಿರುವುದನ್ನು ಅವರು ಗಮನಿಸಿದರು.

''ಹಾಗಾದರೆ, ಈ ದೇಶವನ್ನಾಳುವ ಸುಲ್ತಾನರಿಗೆ ಯಾವುದೇ ಹಕ್ಕಿಲ್ಲವೆಂದು ತಾವು ಹೇಳುತ್ತಿರುವುದೇ?'' ಸುಲ್ತಾನರ ಪ್ರಶ್ನೆ.

ಕಾಝಿಯವರು ಸುಲ್ತಾನರನ್ನು ನೋಡುತ್ತಾ: ''ನಿಮಗಿರುವ ಹಕ್ಕು ಬೇರೆಯವರಿಗಿಂತ ಹೆಚ್ಚಾಗಲಾರದು'' ಎಂದು ಉತ್ತರಿಸಿದರು.

ಸುಲ್ತಾನ್: ''ಅದು ಯಾಕೆ?''

ಕಾಝಿ: ''ಉದಾತ್ತ ಮೌಲ್ಯಗಳ ಆಧಾರದಲ್ಲಿ ನೀವು ವ್ಯವಹರಿಸುವುದಾದರೆ ಯುದ್ಧದಲ್ಲಿ ಭಾಗವಹಿಸಿದವರಿಗೆ ಲಭಿಸಿದಷ್ಟೇ ನಿಮಗೂ ಲಭಿಸಬಹುದು. ಅದಕ್ಕಿಂತ ಹೆಚ್ಚು ಪಡೆಯುವ ಹಕ್ಕು ನಿಮಗಿಲ್ಲ.''



ಕಾಝಿ: ''ಅದಕ್ಕಿಂತಲೂ ಕೆಳಗಿಳಿಯಬೇಕೆಂದು ನೀವು ಬಯಸುವುದಾದರೆ ನಿಮ್ಮ ಸೇನಾಧಿಕಾರಿಗಳಿಗೂ ಉನ್ನತ ದರ್ಜೆಯಲ್ಲಿರುವವರಿಗೂ ಕೊಡುವಷ್ಟನ್ನು ನೀವು ಪಡೆಯಬಹುದು.''

ಸುಲ್ತಾನ್: ಇದಕ್ಕಿಂತ ಭಿನ್ನವಾದ ಬೇರೆ ದಾರಿ ಇಲ್ಲವೆಂದು ತಾವು ಹೇಳುತ್ತಿರುವುದೇ

ಸುಲ್ತಾನ್: ''ಪ್ರಭೂ, ನಿಮ್ಮ ಮಂತ್ರಿಗಳು ಎಲ್ಲರಿಗಿಂತಲೂ ಹೆಚ್ಚು ಪಡೆಯಬೇಕೆಂದು ಉಪದೇಶಿಸ ಬಹುದು. ಆದರೆ, ಅದು ನಿಮ್ಮ ಗೌರವಕ್ಕೆ ಕುಂದುಂಟಾಗಬಹುದು.''

''ಅದು ಹೇಗೆ?''

''ಆಡಳಿತಗಾರನಾಗಿದ್ದರೂ ಸಾರ್ವಜನಿಕ ಸೊತ್ತಿನಿಂದ ಪಡೆಯುವ ಪ್ರತಿಯೊಂದು ಚಿಕ್ಕಾಸಿನ ಕುರಿತೂ ಅಂತ್ಯ ದಿನದಂದು ದೇವನಿಗೆ ಉತ್ತರ ನೀಡಬೇಕಾದೀತು.''

''ಸುಲ್ತಾನ್ ಸುಮ್ಮನಾದರು. ಕಾಝಿಯವರು ಮುಂದುವರಿಸಿದರು: ''ಪ್ರಭೂ, ಕ್ಷಮಿಸಬೇಕು. ನನ್ನ ಅಲ್ಪಜ್ಞಾನದಿಂದ ಇದರ ಹೊರತು ಬೇರೇನೂ ನನಗೆ ತಿಳಿದಿಲ್ಲ.'' ನಂತರ ಅವರು ಅಲ್ಲಿ ನಿಲ್ಲಲಿಲ್ಲ. ಅತ್ಯಂತ ಭಾರದ ಹೆಜ್ಜೆಗಳೊಂದಿಗೆ ರಾಜದರ್ಬಾರಿನಿಂದ ಹೊರನಡೆದರು. ಸಭಿಕರೆಲ್ಲರೂ ಈ ದೃಶ್ಯವನ್ನು ಕಂಡು ಬೆರಗಾದರು. ಅವರು ಸುಲ್ತಾನರು ಎಂತಹ ಆಜ್ಞೆ ಹೊರಡಿಸುತ್ತಾರೆಂಬುದನ್ನು ಕುತೂಹಲದಿಂದ ಕಾಯುತ್ತಿದ್ದರು. ಕಾಝಿಯವರ ಮಾತುಗಳು ಸುಲ್ತಾನರ ಮನಸ್ಸಿನ ಅಂಧಕಾರವನ್ನು ನೀಗಿಸಿತ್ತು. ತಡಮಾಡದೆ ಕಾಝಿಯವನ್ನು ಗೌರವಿಸಿ, ಉಡುಗೊರೆಗಳನ್ನು ನೀಡುತ್ತಾ'' ಮಾನ್ಯರೇ, ಎಂದೆಂದಿಗೂ ಈ ರಾಜ್ಯಕ್ಕೆ ಬೆಳಕಾಗಿರಿ'' ಎಂದು ಹೇಳಿದರು.

---

• ಅಲಾವುದ್ದೀನ್ ಖಿಲ್ಜಿ ಕಾಶ್ಮೀರ, ಅಸ್ಸಾಂ ಮತ್ತು ಕೇರಳವನ್ನು ಹೊರತು ಪಡಿಸಿ ಮಿಕ್ಕ ರಾಜ್ಯಗಳನ್ನು ವಶಪಡಿಸಿ, ದೆಹಲಿಯನ್ನು ರಾಜಧಾನಿಯನ್ನಾಗಿ ಮಾಡಿ ಆಡಳಿತ ನಡೆಸಿದ್ದ ಆಡಳಿತಾಧಿಕಾರಿಯಾಗಿದ್ದರು. (1296-1316)

# 10. ಹುತಾತ್ಮನ ಸಂಪಾದನೆ

ಡಾಕ್ಕಾ ರಾಜ್ಯವನ್ನಾಳುತ್ತಿದ್ದ ಬಾಮಿನಿ ರಾಜಂದಿರ ಪೈಕಿ ಮುಹಮ್ಮದ್ ಶಾ ಕೂಡ ಒಬ್ಬ. ಮಹ್ಮೂದ್ ಗವಾನ್ ಅವರ ಪ್ರಸಿದ್ಧ ಮಂತ್ರಿಯಾಗಿದ್ದರು. ವಿಜಯನಗರ ಮತ್ತು ಮಾಳ್ವ ಸಾಮ್ರಾಜ್ಯಗಳನ್ನು ಯುದ್ಧದಲ್ಲಿ ಗೆದ್ದು, ಬಾಮಿನಿ ದೇಶದೊಂದಿಗೆ ಸೇರಿಸುವುದರಲ್ಲಿ ಗವಾನರ ಪಾತ್ರ ಮುಖ್ಯವಾಗಿತ್ತು. ಗವಾನ್ ಬಾಮಿನಿ ಸಾಮ್ರಾಜ್ಯವನ್ನು ಎಂಟು ಪ್ರಾಂತ್ಯಗಳಾಗಿ ಮಾಡಿದ್ದು ಮಾತ್ರವಲ್ಲ, ದೇಶದ ಸಂಪೂರ್ಣ ಭೂಮಿಯನ್ನು ಸರ್ವೇ ನಡೆಸಿದ್ದರು. ಅವರು ಸ್ಥಾಪಿಸಿದ ಬೀದರ್‌ನ ವಿಜ್ಞಾನ ಕೇಂದ್ರವು ದೇಶದಾದ್ಯಂತ ಹೆಸರುವಾಸಿಯಾಗಿದೆ. ಮಹ್ಮೂದ್ ಗವಾನ್ ದೇಶಕ್ಕೆ ಸಲ್ಲಿಸಿದ ಸೇವೆಗಳಿಂದಾಗಿ ಮುಹಮ್ಮದ್ ಶಾ ರಿಂದ ಬಹಳ ಮೆಚ್ಚುಗೆಯನ್ನು ಪಡೆದಿದ್ದರು ರಾಜರು ಮಂತ್ರಿಯ ಮನೆಗೆ ಭೇಟಿ ಕೊಟ್ಟು ರಾಜ ಚಿಹ್ನೆಯಿರುವ ಮೇಲು ಹೊದಿಕೆಯನ್ನು ನೀಡಿ ಗೌರವಿಸಿದ್ದರು. ಈ ವಿಷಯಗಳು ಅರಮನೆಯಲ್ಲಿಯೇ ಗವಾನರಿಗೆ ಅನೇಕ ಶತ್ರುಗಳುಂಟಾಗಲು ಕಾರಣವಾಯಿತು. ಗವಾನರಾದರೋ ಸರಳ ಜೀವನವನ್ನು ಸಾಗಿಸುತ್ತಾ ಇನ್ನಷ್ಟು ಗೌರವಕ್ಕೆ ಪಾತ್ರನಾದರು. ಸಂಪತ್ತುಗಳನ್ನೆಲ್ಲಾ ಗವಾನ್ ದಾನ ಮಾಡಿದರು. ಒಂದು ಗ್ರಂಥ, ಒಂದು ಆನೆ ಮತ್ತು ಕುದುರೆಯೊಂದನ್ನು ಬಿಟ್ಟರೆ ಬೇರೇನೂ ಅವರ ಕೈಯಲ್ಲಿರಲಿಲ್ಲ. ಒಮ್ಮೆ ಒಬ್ಬ ವ್ಯಕ್ತಿ ಪ್ರಶ್ನಿಸಿದರು: ''ಮಾನ್ಯರೇ, ಇದೆಲ್ಲವನ್ನು ತೊರೆದ ಜೀವನದ ತಿರುಳೇನು?''

ಗವಾನ್: ''ರಾಜ ಮತ್ತು ಪ್ರಜೆಗಳು ನನ್ನನ್ನು ಹೆಚ್ಚೆಚ್ಚು ಗೌರವಿಸುತ್ತಿರುವಾಗ ನನ್ನಲ್ಲಿ ಅಹಂಕಾರವುಂಟಾಗಬಹುದು. ಅದರಿಂದ ನಾನು ಭಯಪಡುತ್ತೇನೆ. ಅಹಂಕಾರವು ನನ್ನನ್ನು ಪಾಪ ಕೃತ್ಯಗಳನ್ನೆಸಗಲು ಪ್ರೇರೇಪಿಸಬಹುದು. ಪಾಪಗಳನ್ನೆಸಗಲು ಪ್ರೇರಣೆ ನೀಡುವ ವಸ್ತುಗಳನ್ನು ನಾನು ತೊರೆಯುತ್ತೇನೆ'' ಎಂದು ಉತ್ತರಿಸಿದರು.

''ಆನೆ ಮತ್ತು ಕುದುರೆಯನ್ನು ಬಳಿಯಲ್ಲಿರಿಸಿರುವುದರ ಮರ್ಮವೇನು?''

ವ್ಯಕ್ತಿ ಪುನಃ ಪ್ರಶ್ನಿಸಿದರು.

''ಓ... ಅದು ಕೆಲವು ಕಾಲದವರೆಗೆ ನನ್ನ ಬಳಿಯಲ್ಲಿರುವುದು. ವಾಸ್ತವದಲ್ಲಿ ಅದು ದೇಶದ ಸೊತ್ತಾಗಿದೆ.'' ಗವಾನ್ ನಗುತ್ತಾ ಉತ್ತರಿಸಿದರು.

ವ್ಯಕ್ತಿಗೆ ಇನ್ನೊಂದು ಸಂಶಯ: ''ಹಾಗಾದರೆ ಗ್ರಂಥ.''

''ಮುಂದಿನ ತಲೆಮಾರುಗಳಿಗಾಗಿ ಸಂರಕ್ಷಿಸಲು ಮತ್ತು ಸಾಯುವಾಗ ಸೂಕ್ತವಾದ ಕೈಗಳಿಗೆ ತಲುಪಿಸಲು ನಾನು ಹೊಣೆಗಾರನಾಗಿದ್ದೇನೆ. ಇದರ ಹೊರತು ಬೇರೆ ಯಾವ ಕಾರಣವೂ ಇಲ್ಲ.'' ಗವಾನ್ ಹೇಳಿದರು.

ಗವಾನರ ಪಾಲಿಗೆ ಇದೆಲ್ಲವೂ ಇನ್ನಷ್ಟು ಜನಪ್ರಿಯತೆಯನ್ನು ಗಳಿಸಲು ಕಾರಣವಾಯಿತು. ಮಂತ್ರಿ ಪದವಿಯಲ್ಲಿ ಅವರು ಶೋಭಿಸಿದರು. ಅರಮನೆಯಲ್ಲಿದ್ದ ಗವಾನರ ಶತ್ರುಗಳಿಗೆ ಇದಾವುದನ್ನೂ ಸಹಿಸಲಾಗಲಿಲ್ಲ. ಅವರು ಅನೇಕ ಬಾರಿ ಗೂಢಾಲೋಚನೆ ನಡೆಸಿ ಗವಾನನ್ನು ಹೇಗಾದರೂ ಮಾಡಿ ದಾರಿಯಿಂದ ನೀಗಿಸಬೇಕೆಂದು ತಂತ್ರ ಪ್ರಯೋಗಿಸಿದ್ದರು. ಅನೇಕ ಬಾರಿ ಅವರ ಕುತಂತ್ರಗಳು ವಿಫಲವಾಗಿತ್ತು. ಆದರೆ ಅವರು ಗೂಢಾಲೋಚನೆ ನಡೆಸುತ್ತಲೇ ಇದ್ದರು. ಕೊನೆಗೂ ಒಂದು ತಂತ್ರ ಪ್ರಯೋಗಿಸಿದರು. ಆ ಪ್ರಕಾರ ಗವಾನರ ಕೈ ಬರಹವಿರುವ ಒಂದು



ಭೂಮಿಯ ನಕಲಿ ನಕ್ಷೆಯನ್ನು ತಯಾರಿಸಿ, ಅದರಲ್ಲಿ ಗವಾನರ ನಕಲಿ ಸಹಿಯನ್ನು ಹಾಕಿದ ಅವರು, ಇಂತಹ ವ್ಯವಹಾರಗಳು ದೇಶ ದ್ರೋಹವಾಗಿದೆಯೆಂದು ಮುಹಮ್ಮದ್ ಶಾರಿಗೆ ತಿಳಿಸಿದರು. ನಕ್ಷೆಗಳನ್ನು ಬಹಳ ಗುಪ್ತವಾಗಿ ರಾಜನ ಸಮಕ್ಷಮಕ್ಕೆ ತರಲಾಗಿತ್ತು. ದೇಶ ದ್ರೋಹಕ್ಕೆ ಸರಿಯಾದ ಶಿಕ್ಷೆ ನೀಡದೆ ಹೋದರೆ ಒಂದು ದಿನ ಆಡಳಿತವೇ ಅನ್ಯಾಯವಾಗಿ ನಷ್ಟವಾಗುವುದೆಂದು ಅವರು ರಾಜನಿಗೆ ಮುನ್ನೆಚ್ಚರಿಕೆ ನೀಡಿದರು.

ಮುಹಮ್ಮದ್ ಶಾ ಅವರ ಮಾತುಗಳನ್ನು ನಂಬಿದರು. ಗವಾನರಿಂದ ಅವರು ಇದನ್ನು ನಿರೀಕ್ಷಿಸಿರಲಿಲ್ಲ, ಆದರೆ.... ಗವಾನನ ಶತ್ರುಗಳು ''ಗವಾನನ ಜೀವನವೇ ನಾಟಕವಾಗಿದ್ದು, ಹೀಗೆಯೇ ಮುಂದುವರಿದರೆ ಕೊನೆಗೆ ಆಡಳಿತವನ್ನು ತಲೆಕೆಳಗಾಗಿಸಿ, ಆಡಳಿತವನ್ನೇ ವಶಪಡಿಸಿಕೊಳ್ಳುವ ಸಾಧ್ಯತೆಯಿದೆಯೆಂದು ಅವರು ಹೇಳಿದರು. ಮುಹಮ್ಮದ್ ಶಾ ಮುಂದೇನೂ ಆಲೋಚಿಸಲಿಲ್ಲ, ಮಹ್ಮೂದ್ ಗವಾನನ್ನು ವಧಿಸಲು ಆಜ್ಞೆ ಹೊರಡಿಸಿದರು.

ಮಹ್ಮೂದ್ ಗವಾನ್ ರಾಜನನ್ನು ಭೇಟಿಯಾಗಲು ಅನುಮತಿ ಕೇಳಿದರು. ಕೊನೆಗೂ ನೋಡಲು ಅವಕಾಶ ನೀಡಲಾಯಿತು. ಅತ್ಯಂತ ಕುಪಿತನಾಗಿ ಮುಹಮ್ಮದ್ ಶಾ ''ಏನು ಬೇಕು?'' ಎಂದು ಕೇಳಿದರು.

''ನಿಮಗೆ ಒಂದು ವಿಷಯವನ್ನು ತಿಳಿಸುವುದು ನಿಮ್ಮ ಸೇವಕನೆಂಬ ನೆಲೆಯಲ್ಲಿ ನನ್ನ ಕರ್ತವ್ಯವಾಗಿದೆಯೆಂದು ನಾನು ಭಾವಿಸುತ್ತೇನೆ.'' ಗವಾನ್ ಹೇಳಿದರು.

''ಇನ್ನಾವ ರಾಜ ಸೇವೆ ಮಾಡಲಿಕ್ಕಿದೆ?'' ಸಿಟ್ಟಿನ ಭರದಲ್ಲಿ ರಾಜ ರೇಗಿದರು. ಗವಾನ್ ನಯವಾಗಿ ''ನಿಮ್ಮ ತಂದೆಯ ಆಡಳಿತ ಕಾಲದಿಂದ ನಾನು ಈ ಸಾಮ್ರಾಜ್ಯದ ಸೇವೆಗಾಗಿ ನೆಲೆನಿಂತವನಾಗಿದ್ದೇನೆ. .....ನನ್ನ ಸಾವು ಈ ದೇಶಕ್ಕೆ ದೊಡ್ಡ ನಷ್ಟವನ್ನೇನೂ ಉಂಟು ಮಾಡಲಾರದು. ಆದರೆ.... ಮುಂದಾಲೋಚನೆಯಿಲ್ಲದೆ, ಅನ್ವೇಷಣೆಗಳಿಲ್ಲದೆ ತೆಗೆದ ಈ ತೀರ್ಮಾನವು ನಿಮ್ಮ ಭವಿಷ್ಯದ ಯಶಸ್ಸಿಗೆ ಕಳಂಕವಾಗಬಲ್ಲುದು''ಎಂದು ಹೇಳಿದರು.

ಮುಹಮ್ಮದ್ ಶಾ ಮನಸ್ಸು ಕರಗಲಿಲ್ಲ, ಅವರು ಮರಣದಂಡನೆ ವಿಧಿಸಿಯೇ ಬಿಟ್ಟರು. ಅಬಿಸೀನಿಯಾದ ಗುಲಾಮನೊಬ್ಬ ಗಲ್ಲು ಶಿಕ್ಷೆಯನ್ನು ಮಾಡಿಬಿಟ್ಟನು. ದೇವನನ್ನು ಸ್ತುತಿಸುತ್ತಾ ಗವಾನ್ ಶಾಶ್ವತವಾಗಿ ಈ ಲೋಕಕ್ಕೆ ವಿದಾಯ ಹೇಳಿದರು.

ಗವಾನ್ ಅಕ್ರಮ ವ್ಯವಹಾರಗಳಿಂದ ಬಹಳಷ್ಟು ಸಂಪಾದಿಸಿದ್ದರೆಂಬುದನ್ನು ಅವನ ಶತ್ರುಗಳು ತಿಳಿಸಿದ್ದರು. ಆದ್ದರಿಂದ ರಾಜ ಗವಾನನ ಸೊತ್ತುಗಳ ಲೆಕ್ಕವನ್ನು ನೀಡಲು ಆಜ್ಞಾಪಿಸಿದರು. ಎಲ್ಲ ಸೊತ್ತುಗಳೂ ಸಾರ್ವಜನಿಕ ಖಜಾನೆಗೆ ಸೇರಿಸಲಾಗುವುದೆಂದೂ ಘೋಷಿಸಲಾಗಿತ್ತು. ಹುಡುಕಲಾರಂಭಿಸಿದ ರಾಜ ಭಟರು ಊರಿಡೀ ಅಲೆದಾಡಿದ್ದರೂ ಗವಾನನ ಹೆಸರಲ್ಲಾಗಲೀ ಕುಟುಂಬದವರ ಹೆಸರಲ್ಲಾಗಲೀ ಒಂದು ಚಿಕ್ಕಾಸು ಕೂಡಾ

ಕಂಡು ಹಿಡಿಯಲು ಸಾಧ್ಯವಾಗಲಿಲ್ಲ. ಒಬ್ಬ ರಾಜ ಸೇವಕ ರಾಜನ ಬಳಿಗೆ ಬಂದು: ''ಮಹಾರಾಜರೇ, ನಿಮಗೆ ನಂಬಲಸಾಧ್ಯವಾದ ಒಂದು ವಿಷಯವನ್ನು ತಿಳಿಸಲು ನಿಮ್ಮ ಮುಂದೆ ನಿಂತಿರುವೆನು.''

''ಸಂಕೋಚವಿಲ್ಲದೆ ಹೇಳು.'' ಮುಹಮ್ಮದ್ ಶಾ ಆದೇಶಿಸಿದರು.

''ಮೃತಪಟ್ಟ ಗವಾನನ ಹೆಸರಲ್ಲಾಗಲೀ ಆತನ ಕುಟುಂಬದವರ ಹೆಸರಲ್ಲಾಗಲೀ ಯಾವ ಸೊತ್ತೂ ಸಿಗಲಿಲ್ಲ. ಅವರ ಬಳಿಯಲ್ಲಿರುವ ಸೊತ್ತು ಒಂದು ಮುಷ್ಟಿಯಷ್ಟು ಮಾತ್ರ. ತನ್ನ ಬಳಿಯಿದ್ದ ಆನೆ ಮತ್ತು ಕುದುರೆಯನ್ನು ಅರಮನೆಗೆ ಕಳುಹಿಸಿದ್ದರು. ಗ್ರಂಥವನ್ನು ಒಬ್ಬ ವಿದ್ವಾಂಸನಿಗೆ ನೀಡಿದ್ದಾರೆ.''

ರಾಜ ಆರೋಪ ಹೊರಿಸುವವರನ್ನು ನೋಡಿದರು. ಅವರಲ್ಲೊಬ್ಬ ನಡುಗುತ್ತಾ ಹೇಳಿದ: ''ಹಾಗಾಗಲು ಸಾಧ್ಯವಿಲ್ಲ.''

ಸೇವಕ ಹೇಳಿದ: ''ನಾನಿಲ್ಲಿ ತಿಳಿಸಿದ ವಿಷಯ ಸತ್ಯವಾಗಿದೆ.''

ಮುಹಮ್ಮದ್ ಶಾ ಪ್ರಶ್ನಿಸಿದರು: ''ನನ್ನ ತಂದೆಯಿಂದ ಅವರು ಬೇಕಾದಷ್ಟು ಅನುಕೂಲತೆಗಳನ್ನು ಪಡೆಯುತ್ತಿರಲಿಲ್ಲವೇ?''

''ಹೌದು ಪ್ರಭೂ.''

''ಒಬ್ಬ ರಾಜನಿಗೆ ಸಮಾನವಾದ ಸಂಪಾದನೆಗಳಿದ್ದು ಅದೆಲ್ಲವನ್ನೂ ಏನು ಮಾಡಿದರು?'' ಸೇವಕ ಸ್ವಲ್ಪ ಹೊತ್ತು ಸುಮ್ಮನಿದ್ದು ತನ್ನ ಮಾತನ್ನು ಮುಂದುವರಿಸಿದ: ''ಪ್ರಭೂ, ಸತ್ಯವನ್ನೇ ಹೇಳಲು ನಾನು ಬಾಧ್ಯಸ್ತನಾಗಿದ್ದೇನೆ. ಅವರ ಬಳಿಯಿದ್ದ ಎಲ್ಲ ಸೊತ್ತುಗಳಿಗೂ ದಾಖಲೆಗಳಿವೆ. ಆದರೆ ಅದರಲ್ಲಿ ಯಾವುದನ್ನೂ ಅವರು ತನ್ನ ವಶದಲ್ಲಿರಿಸಲಿಲ್ಲ. ಬದಲಾಗಿ ತನ್ನ ಕೆಳಗಿನ ನೌಕರರಿಗೂ ಸೈನಿಕರಿಗೂ ಹಂಚುತ್ತಿದ್ದರು. ಉಳಿದ ಸೊತ್ತುಗಳನ್ನು ದೇವನ ಹೆಸರಲ್ಲಿ ಬಡವರಿಗೆ ದಾನ ಮಾಡುತ್ತಿದ್ದರು. ಜೀವನದ ಅಂತ್ಯದಲ್ಲಿ ಆಹಾರ ಮತ್ತು ವಸ್ತ್ರಗಳಿಗೆ ಬೇಕಾದ ಸಂಪತ್ತಿನ ಹೊರತು ಬೇರೇನೂ ಅವರ ಬಳಿಯಲ್ಲಿರಲಿಲ್ಲ. ಆದರೆ ಅದೆಲ್ಲದಕ್ಕೂ ದಾಖಲೆ ಪತ್ರಗಳಿವೆ.''

ಮುಹಮ್ಮದ್ ಶಾ ನಾಚಿಕೆಯಿಂದ ತಲೆ ತಗ್ಗಿಸಿದರು. ಮುಹಮ್ಮದ್ ಗವಾನ ಇತಿಹಾಸದಲ್ಲಿ ಅಮರರಾದರು.

---

• 1347ರಿಂದ 1526ರವರೆಗೆ ಢಾಕ್ಕಾ ರಾಜ್ಯವನ್ನಾಳಿದ್ದು ಬಾಮಿನಿ ರಾಜವಂಶವಾಗಿತ್ತು. ಮೊದಲ ರಾಜಧಾನಿ ಕರ್ನಾಟಕದ ಗುಲ್ಬರ್ಗಾವಾಗಿತ್ತು. ನಂತರ ಅದನ್ನು ಬೀದರಿಗೆ ಸ್ಥಳಾಂತರಿಸಲಾಯಿತು. ಮುಹಮ್ಮದ್ ಶಾ 1463ರಿಂದ 1482ರವರೆಗೆ ಆಡಳಿತ ನಡೆಸಿದ್ದನು. ಮುಹಮ್ಮದ್ ಶಾನ ಅತ್ಯಂತ ಸಮರ್ಥನಾದ ಅಧಿಕಾರಿ ಮಹ್ಮೂದ್ ಗವಾನ್ ಆಗಿದ್ದರು.